'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು.

870 ಕೆ. ವೀರಭದ್ರಯ್ಯ,B.Sc,BEd
S/o ರುದ್ರಪ್ಪ
ಕಾಳೇನಹಳ್ಳಿ
ತುಮಕೂರು ತಾಲ್ಲೂಕು

871 ದಾಕ್ಷಾಯಿಣಿ
W/o ಬಿ. ಗಂಗಾಧರಯ್ಯ
ಶಿವಕೃಪಾ 3ನೇ ಮೇನ್ ರೋಡ್
ಸಿದ್ಧಗಂಗಾ ಬಡಾವಣೆ
ತುಮಕೂರು 2

872 ಪಾರ್ವತಮ್ಮ
W/o ಬಸಪ್ಪ
ಮಾರ್ಕೇಟ್ ರೋಡ್
ನೆಲಮಂಗಲ ಬೆಂಗಳೂರ ಜಿಲ್ಲೆ

873 ಕೆ. ಎಸ್. ಹೊನ್ನಗಂಗಪ್ಪ
ನಂ. 21-1ನೇ ಕ್ರಾಸ್
ಅಗ್ರಹಾರ ದಾಸರಹಳ್ಳಿ
ಮಾಗಡಿ ರೋಡ್ ಬೆಂ -9

874 ಪರಮಶಿವಯ್ಯ
ಉಪಾಧ್ಯಾಯರು ಬಯಂಡಳ್ಳಿ
ಕಡಬಗೆರೆ ಪೋಸ್ಟ್
ಬೆಂಗಳೂರು 560010

875 ಹೆಚ್ ಎಸ್. ಶಿವಲಿಂಗಯ್ಯ
ನಂ. 635 4ನೇ ಬ್ಲಾಕ್
ರಾಜಾಜಿನಗರ
ಬೆಂಗಳೂರು ಜಿಲ್ಲೆ

876 ಟಿ. ಎಸ್. ಸಿದ್ದಲಿಂಗಯ್ಯ
ನಂ. 1037, 4ನೇ ಬ್ಲಾಕ್
ರಾಜಾಜಿನಗರ
ಬೆಂಗಳೂರು 560010

877 ಶೇಖರ್ ಅಂಡ್ ಕೋ C.A
ನಂ 3/1 ಸಿದ್ಧಗಂಗಾ ಭವನ್
ಬಿ.ವಿ.ಕೆ. ಐಯ್ಯಂಗಾರ್
ರೋಡ್. ಬೆಂಗಳೂರು 3

878 ಟಿ. ಎಸ್. ಬಸವಯ್ಯ
ಉಪಾಧ್ಯಾಯರು H.P.S
ಕೋಲಗುಂದ ಅರಸೀಕೆರೆ
ತಾಲ್ಲೂಕ್, ಹಾಸನ ಜಿಲ್ಲೆ

879 ಕೆ. ವಿ. ಅಶೋಕ್‌ಕುಮಾರ್
ನಂ. 256 ನ್ಯೂ ಲೇ ಔಟ್
ಇಂದಿರಾನಗರ ಇಟ್ಟಿಗೇಗೂಡು
ಮೈಸೂರು 570010

# ಸಿದ್ಧಗಂಗಾ

ಸಂಪುಟ-೧೭ ಸಂಚಿಕೆ-೧೦ ಅಕ್ಟೋಬರ್, ೧೯೮೧

**ಭವಾಂಬೋಧಿನಾವಂ ಸದಾಶುದ್ಧಭಾವಂ**
**ಶಿವಂ ಶಾಂತನೇಕಂ ಪರಿತ್ರಾತಲೋಕಂ ।**
**ಶಿವಾನಂದಲಿಂಗಂ ಶಿವಾದ್ವೈತಲಿಂಗಂ**
**ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥**

  

ನಡೆಶುದ್ಧ, ನುಡಿಶುದ್ಧ ತನುಶುದ್ಧ ಮನಶುದ್ಧ
ಭಾವಶುದ್ಧವಾದವರನು ಎನಗೊಮ್ಮೆ ತೋರಾ !
ನಡೆಯೆಲ್ಲ ಸದಾಚಾರ, ನುಡಿಯೆಲ್ಲ ಶಿವಾಗಮ,
ನಿತ್ಯಶುದ್ಧರಾದವರನೆನಗೊಮ್ಮೆ ತೋರಾ !
ಕತ್ತಲೆಯ ಮೆಟ್ಟಿ ತಳವೆಳಗಾಗಿ
ಹೊರಗೊಳಗೊಂದಾಗಿ ನಿಂದ ನಿಮ್ಮ ಶರಣರ–
ನೆನಗೊಮ್ಮೆ ತೋರಾ ಚೆನ್ನಮಲ್ಲಿಕಾರ್ಜುನಾ.

**—ಅಕ್ಕಮಹಾದೇವಿ**

# ಈ ಸಂಚಿಕೆಯಲ್ಲಿ



## ಚಂದಾದಾರರಲ್ಲಿ ವಿನಂತಿ

1981 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ, ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿ ಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀವಾಣಿ

ಬ್ರಹ್ಮಚರ್ಯವೇ ಸರ್ವ ಸುಖದ ಮೂಲ ಹೇತು; ಮಾನವ ಜೀವಿತದ ಸಾರಸರ್ವಸ್ವ; ಮಹಾಕಲ್ಯಾಣದಾಯಕ. ಇಂಥ ಬ್ರಹ್ಮಚರ್ಯ ಶಬ್ದಕ್ಕೆ ವ್ಯಾಪಕವಾದ ಅರ್ಥವಿದ್ದರೂ ಜೀವನ ಸತ್ತ್ವವಾದ ವೀರ್ಯ ಸಂರಕ್ಷಣೆಯ ವಿಚಾರದಲ್ಲಿ ಬಳಸುವುದು ಸಾಮಾನ್ಯ ರೂಢಿಯಲ್ಲಿದೆ. ನಮ್ಮ ಭರತಖಂಡದಲ್ಲಿ ಈ ಬ್ರಹ್ಮಚರ್ಯೆ ಪರಿಪಾಲನೆಗೆ ವಿಶೇಷವಾದ ಮಹತ್ತ್ವ ಕೊಡಲಾಗಿದೆ: "ಬ್ರಹ್ಮಚರ್ಯರೂಪತಪಸ್ಸಿನಿಂದಲೇ ರಾಜನು ರಾಷ್ಟ್ರವನ್ನು ಸಂರಕ್ಷಿಸುತ್ತಾನೆ; ಬ್ರಹ್ಮಚರ್ಯೆಯಿಂದಲೇ ದೇವತೆಗಳು ಮೃತ್ಯುವನ್ನು ಜಯಿಸಿದರು; ಇದರಿಂದಲೇ ಇಂದ್ರನು ದೇವತೆಗಳಿಗೆ ಸ್ವರ್ಗ ಸಂಪತ್ತನ್ನು ತಂದುಕೊಟ್ಟನು. 'ಆಚಾರ್ಯೋ ಬ್ರಹ್ಮಚರ್ಯೇಣ ಬ್ರಹ್ಮಚಾರಿಣಮಿಚ್ಛತೇ' ಆಚಾರ್ಯನು ಬ್ರಹ್ಮಚಾರಿಯಾಗಿರತಕ್ಕ ಶಿಷ್ಯನನ್ನು ಇಚ್ಛಿಸುತ್ತಾನೆ"– ಮುಂತಾದ ನುಡಿಗಣದಲ್ಲಿ ಬ್ರಹ್ಮಚರ್ಯೆಯಿಂದಲೇ ದೇವ–ಮಾನವರ ಸರ್ವ ಶಕ್ತಿಗಳೂ ವಿಕಾಸ ಮತ್ತು ವಿಪುಲತೆಯನ್ನು ಪಡೆಯುತ್ತವೆಯೆಂಬುದಾಗಿ ಸಾರಿ ಹೇಳಿದೆ. ಈ ಕಾರಣ ಪ್ರತಿಯೊಬ್ಬ ಮಾನವನೂ ಸುಖದ ಮೂಲಹೇತುವನ್ನು ಕಂಡುಕೊಳ್ಳಬೇಕಾದರೆ ಅವಶ್ಯವಾಗಿ ಬ್ರಹ್ಮಚರ್ಯೆಯನ್ನು ಪರಿಪಾಲನೆ ಮಾಡಬೇಕು.

## "ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ,
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

### ಸಂಪಾದಕ ಮಂಡಲಿ

ಪಂ॥ ಚನ್ನಪ್ಪ ಎರೇಸೀಮೆ
ಪಿ. ಎನ್. ಚಂದ್ರಶೇಖರಯ್ಯ
ಬಸವರಾಜು

ಜಾಹಿರಾತು ಕಾರ್ಯದರ್ಶಿ
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

### ಚಂದಾ ವಿವರ

ಆಜೀವ ಸದಸ್ಯತ್ವ 151-00 ರೂ
ವಾರ್ಷಿಕ ಚಂದಾ 12-00 ರೂ

ಪ್ರಕಾಶಕರು
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ—572104
ತುಮಕೂರು ಜಿಲ್ಲೆ.

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ, ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೇ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರೆಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

ಭಾರತದಲ್ಲಿಂದು ಮತಾಂತರದ ಪಿಡುಗು ಸರ್ವತ್ರ ವ್ಯಾಪಿಸಿದೆ. ದಿನದಿನಕ್ಕೆ ಅದು ಉಲ್ಬಣಗೊಳ್ಳುತ್ತಿದೆ. ಒಂದು ಕಡೆ ಮುಸ್ಲಿಂ ಧರ್ಮಕ್ಕೆ ಮತಾಂತರಗೊಂಡರೆ ಮತ್ತೊಂದು ಕಡೆ ಬೌದ್ಧ ಧರ್ಮಕ್ಕೆ ಲಕ್ಷಗಟ್ಟಲೆ ವಿಜಯದಶಮಿಯಂದು ಮತಾಂತರ ಗೊಂಡದ್ದನ್ನು ಪತ್ರಿಕೆಗಳಲ್ಲಿ ಓದಿದ್ದಾಯಿತು. ಇದು ಡಾ॥ ಅಂಬೇಡ್ಕರ್‌ರವರ ಅನು ಕರಣೆ ಎಂದೂ ಕಾರಣ ತಿಳಿಯಿತು. ಈ ಮತಾಂತರದ ಬಗ್ಗೆ ಕೆಲವು ನಾಯಕರು ಮಠಾಧಿಪತಿಗಳನ್ನು ದೂರಿದ್ದಾರೆ. ಕೆಲವರು ಸಂಪ್ರದಾಯ ಶರಣರನ್ನು ದ್ವೇಷಿಸಿದ್ದಾರೆ. ಮತ್ತೆ ಕೆಲವು ವಿದ್ವಾಂಸರು ಸಮಾಜದಲ್ಲಿನ ಮತ್ತು ದೇಶದಲ್ಲಿನ ಜಾತಿಪದ್ಧತಿಯನ್ನೇ ಧ್ವಂಸ ಮಾಡಿಬಿಡಬೇಕೆಂದು ಜಾತೀಯ ಮುಖಂಡರಿಗೆ ಕರೆಕೊಟ್ಟಿದ್ದಾರೆ. ಕೆಲವು ವಿಚಾರವಾದಿಗಳು ಮತಾಂತರಕ್ಕೆ ಕಾರಣ ಹುಡುಕುತ್ತಾ, ಜಟಕಾ ಹೊಡೆಯುವ ಒಬ್ಬ ಸಾಬಿಯಿಂದ ಹಿಡಿದು, ರಾಷ್ಟ್ರದ ಉಚ್ಚಸ್ಥಾನದಲ್ಲಿರುವ ಪ್ರಥಮ ಪ್ರಜೆ ಅಥವಾ ಪ್ರವಾದಿ ಪೈಗಂಬರ್‌ವರೆಗೆ ಮತ್ತು ಒಬ್ಬ ಗ್ಯಾರೇಜ್ ಕ್ಲೀನರ್‌ನಿಂದ ಹಿಡಿದು ಧರ್ಮ ಬೋಧಕ ಪೋಪ್‌ರವರೆಗೂ ಮಸೀದಿ ಚರ್ಚುಗಳಲ್ಲಿ ಸಮಾನತೆಯಿಂದ ಭಾಗವಹಿಸುವ ಅವಕಾಶವಿದೆ; ನಮ್ಮ ಗುಡಿಗೋಪುರಗಳಲ್ಲಿ ಊಟಉಪಚಾರಗಳಲ್ಲಿ ಹಿಂದೂವನ್ನೇ ಹಿಂದಕ್ಕೆ ತಳ್ಳಿ ತಿರಸ್ಕರಿಸುವ ತಾರತಮ್ಯವೇ ಕಾರಣವೆನ್ನುತ್ತಾರೆ. ಕೆಲವು ಹರಿಜನ ವಿದ್ಯಾವಂತ ಮುಖಂಡರೂ ಈ ಅಭಿಪ್ರಾಯವನ್ನೇ ಸೂಚಿಸಿ ಮತಾಂತರವನ್ನು ಸಮ ರ್ಥಿಸಿಕೊಂಡ ನಿದರ್ಶನಗಳು ಪತ್ರಿಕೆಯಲ್ಲಿ ಪ್ರಕಟವಾಗಿದ್ದವು. ರಾಷ್ಟ್ರಕವಿ ಕುವೆಂಪು ರವರು ಮತಾಂತರಿಗಳನ್ನು ಕುರಿತು, ಮತಾಂತರ ಶಬ್ದವು ವಿಚಾರಪಲ್ಲಟ ಎಂಬ ಅರ್ಥ ವನ್ನು ಕೊಡುತ್ತದೆ. ಆ ವಿಚಾರ ಆಧ್ಯಾತ್ಮ ದೃಷ್ಟಿಯಿಂದ ಹೃದಯ ಪರಿವರ್ತನೆ ಎಂಬ ಭಾವನೆಯನ್ನು ಕೊಡುತ್ತದೆ; ಆದರೆ ಈಗ ಮತಾಂತರಗೊಳ್ಳುವ ಜನರನ್ನು ನೋಡಿದರೆ ಒಂದು ಸಮಾಜವನ್ನು ತೊರೆದು ಮತ್ತೊಂದು ಸಮಾಜವನ್ನು ಸೇರುವುದೇ ವಿನಹ ಅದು ವ್ಯಕ್ತಿಯ ಆಚಾರ ವಿಚಾರ–ಸಂಸ್ಕಾರಗಳಲ್ಲಿ ಪರಿವರ್ತನೆಯನ್ನುಂಟು ಮಾಡುವ ಧಾರ್ಮಿಕ ಬದಲಾವಣೆಯಲ್ಲ ಎಂದಿದ್ದಾರೆ. ಮುಂದುವರಿದು "ಬಾಣಲೆ ಯಿಂದ ಬೆಂಕಿಗೆ ಬೀಳಬೇಡಿ" ಎಂದು ಮತಾಂತರಿಗಳಿಗೆ ಎಚ್ಚರಿಕೆ ಕೊಟ್ಟಿದ್ದಾರೆ. ಇಷ್ಟೆಲ್ಲಾ ನಡೆಯುತ್ತಿದ್ದರೂ ಈ ಬಗ್ಗೆ ಸರಕಾರದ ಕಾರ್ಯಕ್ರಮ ಸ್ಪಷ್ಟವಾಗಿ ಗೋಚ ರಿಸುತ್ತಿಲ್ಲ. ಈ ಮತಾಂತರಕ್ಕೆ ಮೇಲೆ ಕೊಡುವ ಕೆಲವು ಕಾರಣಗಳು ಸತ್ಯವಾದರೂ ಅನ್ಯ ಧರ್ಮೀಯರ ಆಸೆ, ಆಮಿಷ ಮತ್ತು ರಾಜಕೀಯ ಕುಟಿಲ ನೀತಿಯೇ ಪ್ರಬಲ ಕಾರಣವೆಂಬುದಂತೂ ಸ್ಪಷ್ಟವಾಗಿದೆ. "ಹುಲಿಗಂಜಿ ಹುತ್ತವ ಹೊಕ್ಕರೆ ಹಾವು ತಿಂಬುದ ಮಾಣ್ಬುದೇ" ಎಂಬ ಶರಣರ ಹಿತನುಡಿಯೊಡನೆ ಎಚ್ಚರಿಸಿ, ನಮ್ಮವರಲ್ಲಿ ಸಹ ಬಾಳ್ವೆಯ ಕಲೆಯ ಅರಿವು ಎಲ್ಲರಲ್ಲಿಯೂ ಮೂಡಿಸೋಣ.

# ನವನೀತ

**ಆಶಾ ಯಾ ದಾಸಾಸ್ತೇ ದಾಸಾಃ ಸರ್ವ ಲೋಕಸ್ಯ ।**
**ಆಶಾ ಯೇಷಾಂ ದಾಸೀ ತೇಷಾಂ ದಾಸಾಯತೇ ಲೋಕಃ ॥**

—ಸಮಯೋಚಿತ ಪದ್ಯಮಾಲಿಕಾ

ಆಸೆಗೆ ಯಾರು ದಾಸರೋ ಅವರು ಸರ್ವ ಲೋಕಕ್ಕೆ ದಾಸರು. ಯಾರಿಗೆ ಆಸೆಯೇ ದಾಸಿಯಾಗಿರುತ್ತದೆಯೋ ಅವರಿಗೆ ಲೋಕವೇ ದಾಸವಾಗುತ್ತದೆ.

§§ §§ §§

**ನ ಗೃಹಂ ಗೃಹಮಿತ್ಯಾಹುರ್ಗೃಹಿಣೀ ಗೃಹಮುಚ್ಯತೇ ।**
**ಗೃಹಂ ತು ಗೃಹಿಣೀಹೀನಮರಣ್ಯ ಸದೃಶಂ ಭವೇತ್ ॥**

—ಮಹಾಭಾರತ

ಒಂದು ಕಟ್ಟಡವನ್ನು ಗೃಹವೆಂದು ಬಲ್ಲವರು ಹೇಳುವುದಿಲ್ಲ. ಗೃಹಿಣಿಯು ಗೃಹವೆನಿಸುತ್ತಾಳೆ. ಗೃಹಿಣಿಯಿಲ್ಲದ ಮನೆ ಅರಣ್ಯಕ್ಕೆ ಸದೃಶವಾದುದು.

§§ §§ §§

**ದೃಷ್ಟಿಪೂತಂ ನ್ಯಸೇತ್ಪಾದಂ ವಸ್ತ್ರಪೂತಂ ಜಲಂ ಪಿಬೇತ್ ।**
**ಸತ್ಯಪೂತಾಂ ವದೇದ್ವಾಚಂ ಮನಃ ಪೂತಂ ಸಮಾಚರೇತ್ ॥**

—ಮನುಸ್ಮೃತಿ

ಕಣ್ಣಿನಿಂದ ನೋಡಿ ಹೆಜ್ಜೆಯಿಡಬೇಕು. ಬಟ್ಟೆಯಿಂದ ಶೋಧಿಸಿ ನೀರನ್ನು ಕುಡಿಯಬೇಕು. ಸತ್ಯದಿಂದ ಶುದ್ಧನಾದ ಮಾತನ್ನಾಡಬೇಕು. ಮನಸ್ಸಿನಿಂದ ಪವಿತ್ರವಾದ ಕೆಲಸವನ್ನು ಮಾಡಬೇಕು.

# ಚಿಂತನ

—ಟಿ. ಆರ್. ಮಹಾದೇವಯ್ಯ

ಕಸಪೊರಕೆ ನಾವು ದಿನವೂ ಉಪಯೋಗಿಸುವ ಗೃಹಬಳಕೆಯ ಒಂದು ಸಾಧನ. ಅದು ಇಂದಿನ ಚಿಂತನದ ವಸ್ತು. ಇದೇನು ಬೆಳಗ್ಗೆ ಏಳುತ್ತಿದ್ದ ಹಾಗೆಯೇ ಈ ಅಮಂಗಳ ಎನ್ನದಿರಿ. ನಾವು ಅದನ್ನು ದಿವಸವೂ ಬಳಸುತ್ತಿದ್ದೇವಾದರೂ ಅದರ ಬಗ್ಗೆ ತಿಳಿದಿರುವುದು ಬಹಳ ಕಡಿಮೆ. ಅದನ್ನು ನಾವು 'ಗೃಹ ಚಾಮರ' ವೆಂದು ಲೇವಡಿ ಮಾಡುತ್ತೇವೆ. ತಪ್ಪು ಮಾಡಿದವರಿಗೆ ಈ ಚಾಮರಸೇವೆ ಬೇಕಾ ಎಂದು ಬೆದರಿಕೆಹಾಕುತ್ತೇವೆ. ಗುಡಿಸುವಾಗ ಅದು ಮೈಗೆ ತಾಕಿದರೆ ಅಶುಭವೆಂದು 'ಶಾಂತಂ ಪಾಪಂ' ಎಂದುಕೊಳ್ಳುತ್ತೇವೆ; ಅಷ್ಟೆ. ಆದರೆ ಸ್ವಲ್ಪ ವಿಚಾರಮಾಡಿದರೆ ಅದರಿಂದ ಕಲಿಯಬೇಕಾದ ಪಾಠ ಬಹಳವಿದೆ ಎನ್ನಿಸದಿರದು. ದಿನಕ್ಕೆ ಎರಡು ಸಲ, ಮೂರು ಸಲ ಗುಡಿಸಿದರೂ ಮನೆಯಲ್ಲಿ ಕಸ ತುಂಬುತ್ತಲೇ ಇರುತ್ತದೆ. ಮಕ್ಕಳು ಇದ್ದ ಮನೆಯಲ್ಲಂತೂ ದೇವರೇ ಗತಿ. ಕಸಪೊರಕೆಯ ದುಡಿಮೆ ಜಾಸ್ತಿಯಾಗುತ್ತದೆ. ಸದ್ದುಗದ್ದಲವಿಲ್ಲದೆ ಅದು ನಿರಂತರವಾಗಿ ದುಡಿಯುತ್ತಲೇ ಇರುತ್ತದೆ. ಮಾತಿಗಿಂತ ಕೃತಿ ಲೇಸು ಎಂಬುದು ಅದರ ಪರಿ. 'ಆಡದೆ ಮಾಡುವವನು ರೂಢಿಯೊಳಗುತ್ತಮನು' ಎಂದು ಸರ್ವಜ್ಞ ಹೇಳಿದಂತೆ ಅದರದು ಆಡದೆ ಮಾಡುವ ಉತ್ತಮಗುಣ. ಕೊಳೆಯನ್ನು ಕಳೆವ, ನಿರ್ಮಲ ವಾತಾವರಣವನ್ನುಂಟುಮಾಡುವ ತನ್ನ ಕಾಯಕದಲ್ಲಿ ಅದಕ್ಕೆ ಅಪೂರ್ವವಾದ ನಿಷ್ಠೆ. ಅಷ್ಟು ದುಡಿದು ಅದು ದಣಿದರೂ, ಮನೆಯವರಿಗಾಗಿ ತನ್ನ ದೇಹವನ್ನೇ, ನಿಜವಾದ ಅರ್ಥದಲ್ಲಿ, ಸವೆಸಿದರೂ ಅದೆಂದೂ ಹೇಳಿಕೊಳ್ಳದು. ತನ್ನ ಉಪಕಾರದ ಸೊಲ್ಲೆತ್ತದೆ ಮೂಲೆಯಲ್ಲಿ ಹೋಗಿ ನಿಲ್ಲುವ ಅದರ ರೀತಿ ಎಷ್ಟು ಉದಾತ್ತ ? ಕೆಲಸ ಮಾಡದೆ ಬರೀ ಘೋಷಣೆಗಳಲ್ಲಿ ತಮ್ಮನ್ನು ಮೆರೆಸುವ ಜನರೇ ಎಲ್ಲೆಲ್ಲೂ ಕಾಣುವ ಸಮಾಜದಲ್ಲಿ ಕಸಪೊರಕೆಯ ಈ ವಿನಯವಂತಿಕೆ ಎಷ್ಟು ಅಪೂರ್ವವೆನಿಸುತ್ತದೆ? ಅದಕ್ಕೆ ಕವಿ ಜಿ. ಎಸ್. ಶಿವರುದ್ರಪ್ಪನವರು

> 'ಯಾರ ಕೈಯನೊ ಸೇರಿ ಕಸವ ಗುಡಿಸಿದ ಮೇಲೆ
> ತಾನು ಗುಡಿಸಿದೆನೆಂಬ ಬಿಂಕವಿನಿತಿಲ್ಲದೆಯೆ
> ಮೌನದಲಿ ಮಲಗಿಹುದು ನೋಡಾ ಕಸಪೊರಕೆ'

ಎಂದು ನಮ್ಮ ಗಮನವನ್ನು ಅತ್ತ ಸೆಳೆದಿದ್ದಾರೆ.

ಕಸಪೊರಕೆಯ ಈ ಲೋಕೋಪಕಾರ ಗುಣ ಹಾಗೂ ಸರಸ ಸಜ್ಜನಿಕೆಗಳನ್ನೆ ದೊಡ್ಡಗುಣವೆನ್ನುವುದು. ಕಸಪೊರಕೆಯ ಈ ದೈವೀಗುಣ ನಮ್ಮನ್ನು ಇನ್ನೊಂದು ವಿಚಾರದತ್ತ ಹೊರಳಿಸುತ್ತದೆ.

ನಮ್ಮ ಮನೆಗಳಲ್ಲಿ ತುಂಬುವ ಕಸವನ್ನು ಕಸಪೊರಕೆ ಉಡುಗಿ ನಿರ್ಮಲವಾತಾವರಣವನ್ನುಂಟುಮಾಡುತ್ತದೆ. ಹಾಗೆಯೇ ಜಗವೆಂಬ ಮನೆಯಲ್ಲೂ ಕಸ ತುಂಬುತ್ತಲೇ ಇರುತ್ತದೆ. ಅದು ಅಧರ್ಮ, ಅಜ್ಞಾನ, ಅಮಾನುಷತೆ, ಅಸತ್ಯ ಮೊದಲಾದ ಅವಗುಣಗಳ ಕಸ. ಇಂಥ ಕಸ ಹೆಚ್ಚಿ ಜಗದ ಜೀವಿಗಳಿಗೆ ಉಸಿರು ಕಟ್ಟಿದಂತಾಗುತ್ತದೆ. ಆಗ ಭಗವತ್ ಕೃಪಾಶಕ್ತಿ ಮಹಾತ್ಮನೊಬ್ಬನ ರೂಪಿನಲ್ಲಿ ಅವತರಿಸಿ ಈ ಕಸವನ್ನು, ಬಲ್ಗಸವನ್ನು ಉಡುಗುತ್ತದೆ. ಸಕಲ ಜೀವಾವಳಿಗೆ ಲೇಸ ಬಯಸುವ ಈ ಮಹಾಮಣಿಹವನ್ನು ನೆರವೇರಿಸುತ್ತದೆ. ಜಗದುಪಕಾರಿಯಾದ ಕೆಲಸವನ್ನು ಈ ಮಹಾನುಭಾವರು ಸದ್ದುಗದ್ದಲವಿಲ್ಲದೆ ಮಾಡಿ ತಮ್ಮನ್ನು ಎಂದೂ, ಎಲ್ಲೂ ಮೆರೆಸದೆ ಮರೆಸಿ ಎಲ್ಲೋ ಮೂಲೆಯಲ್ಲಿ ಮೌನವಾಗಿ ನಿಲ್ಲುತ್ತಾರೆ. ಈ ಮಾನವ ಹಿತಸಾಧಕರ ಈ ಮಹದ್ಗುಣಕ್ಕೆ ಕಾರಣವೇನಿರಬಹುದು ?

ಒಳ್ಳೆಯ ಕೆಲಸ ಮಾಡಿದವರು ತಾನು ಮಾಡಿದೆನೆಂಬ ಬಿಂಕ ತೋರುವುದಿಲ್ಲ. ಹಾಗೆ ತೋರಿದ್ದಾದರೆ ಅವರು ಮಾಡಿದ ಉಪಕಾರಕ್ಕೆ ಪ್ರತಿಫಲ ಸಿಕ್ಕದು. ಭಗವಂತನ ಭರ್ತ್ಸನೆಗೆ ಅವರು ಗುರಿಯಾಗುವರು.

> ಮಾಡಿದೆನೆಂಬ ಬಿಂಕ ಮನದಲ್ಲಿ ಹೊಳೆದರೆ
> ಏಡಿಸಿ ಕಾಡುವುದು ಶಿವನ ಡಂಗುರ

ಎಂದು ಬಸವಣ್ಣನವರು ಹೇಳಿದುದರಲ್ಲಿ ಅದು ಸೂಚಿತವಾಗಿದೆ. ಮಾಡಿ ಮರೆಯುವುದು ದೊಡ್ಡವರ ದೊಡ್ಡಗುಣವಾದರೆ, ಮಾಡದೆ ಮೆರೆಯುವುದು ಹಾಗೂ ಪಡೆದು ಮರೆಯುವುದು ನಮ್ಮ ಸಣ್ಣಗುಣ. God gives and forgives, Man gets and forgets ಎಂಬ ಹೇಳಿಕೆ ಯಥಾರ್ಥವಾದದ್ದೇ.

ಇಷ್ಟಾದರೂ ದೈವೀಶಕ್ತಿ ಮಾನವಕುಲೋದ್ಧಾರದ ಕಾರ್ಯವನ್ನು ಸತತವಾಗಿ ಮಾಡುತ್ತಲೇ ಬಂದಿದೆ. ಅದು ಯೇಸುವಾಗಿ, ಮಹಮ್ಮದನಾಗಿ, ಬುದ್ಧನಾಗಿ, ಮಹಾವೀರನಾಗಿ, ಬಸವನಾಗಿ, ಶಂಕರನಾಗಿ, ಈಚೆಗೆ ಗಾಂಧಿಯಾಗಿ ಜಗವನ್ನು ನಿರ್ಮಲಗೊಳಿಸಿ, ಮಾನವನ ಬದುಕನ್ನು ಹಸನುಗೊಳಿಸುವ ಕಸಪೊರಕೆಯ ಕೆಲಸವನ್ನು ಮಾಡಿದೆ. ಅಂಥ ದೊಡ್ಡವರ ಶ್ರಮ, ದುಡಿಮೆಗಳ ಫಲವನ್ನು ಅನುಭವಿಸಿ ನಾವು ಅವರು ನಮ್ಮ ಮುಂದಿರಿಸಿದ ಆದರ್ಶಗಳನ್ನು ಗಾಳಿಗೆ ತೂರಿರುವುದನ್ನು ಕಸಪೊರಕೆ ಎಚ್ಚರಿಸೀತು. ಹೇಳುವುದೊಂದು ಮಾಡುವುದೊಂದು, ಆಡಿ ಮಾಡದೆ

(50ನೇ ಪುಟ ನೋಡಿ)

ಳ

# ಉದ್ಧಾನ ಶಿವಯೋಗಿಗಳವರ ಅದ್ಭುತ ಘಟನೆಗಳು

—ಪಂ|| ಚನ್ನಪ್ಪ ಎರೇಸೀಮೆ

ದಾಸೋಹದ ಖರ್ಚಿಗೆ ರಾಗಿ ಮುಗಿದುಹೋಗಿದೆ ಎಂದು ದಾಸೋಹದವರು ಸ್ವಾಮಿಗಳ ಕಿವಿಗೆ ಸುದ್ದಿ ಮುಟ್ಟಿಸಿದರು. ಸ್ವಾಮಿಗಳು ತಾವೇ ದೊಡ್ಡ ಗಳುವೊಂದನ್ನು ಪಣತದ (ಕಣಜ) ಮೇಲಿನ ಬೆಳಕಿಂಡಿಯಿಂದ ನುಗ್ಗಿಸಿ, ಕುಟ್ಟಿ ನೋಡಿದರು 'ಡಣ್ ಡಣ್' ಎಂದು ನೆಲದ ಸಪ್ಪಳ ಕೇಳಿಸಿತು. ಓಹೋ; ರಾಗಿ ಮುಗಿದು ಹೋಗಿವೆ. ಈಗ ರಾಗಿಯನ್ನೆಲ್ಲಿಂದ ಹೊಂದಿಸುವುದು ? ಎಂದುಕೊಂಡು ಬೆಟ್ಟವನ್ನೇರಿ ಯಾವಾಗಲೂ ಹೋಗಿ ಕುಳಿತುಕೊಳ್ಳುವ ಕಲ್ಲುಬಂಡೆಯ ಮೇಲೆ ಬಾಯ ಮೇಲೆ ಕೈಯಿಟ್ಟು ಮೂಗಿನ ಮೇಲೆ ಬೆರಳಾಡಿಸುತ್ತಾ ಕುಳಿತುಬಿಟ್ಟರು. ಆ ಕಲ್ಲುಬಂಡೆಯ ವೈಶಿಷ್ಟ್ಯವೆಂದರೆ ಸೂರ್ಯೋದಯವಾದೊಡನೆ ಇಲ್ಲಿಗೆ ನೇರವಾಗಿ ಸೂರ್ಯಕಿರಣಗಳು ಬೀಳುತ್ತವೆಂದೂ ಉದ್ಧಾನಸ್ವಾಮಿಗಳು ಅನೇಕ ಪ್ರಸಂಗಗಳಲ್ಲಿ ಬಂಡೆಯಮೇಲೆ ಕುಳಿತುಕೊಳ್ಳುತ್ತಿದ್ದರೆಂದೂ, ಅಲ್ಲಿ ಅವರು ಕುಳಿತುಕೊಂಡಮೇಲೆ ಅವರ ಮನಸ್ಸಿನ ಇಚ್ಛೆಯಂತೆ ಕಾರ್ಯಗಳಾಗುತ್ತಿದ್ದವೆಂದೂ ಹೇಳಲಾಗುತ್ತಿದೆ. [34] ಇವರು ಈ ಕಲ್ಲುಬಂಡೆಯ ಮೇಲೆ ಕುಳಿತಾಗ ಅವರ ಬಳಿಗೆ ಯಾರೂ ಹೋಗುತ್ತಿರಲಿಲ್ಲವಂತೆ.

ಈ ಸಮಯಕ್ಕೆ ಮೆಳೆಹಳ್ಳಿಯ ಭೀಮೇಗೌಡ ಎಂಬುವರು [35] ಊರಿನಿಂದ ಗಾಡಿಯನ್ನು ಹೂಡಿಸಿಕೊಂಡು ದಾಸೋಹಕ್ಕೆ ಸ್ವಲ್ಪ ದವಸಧಾನ್ಯಗಳನ್ನು ಹೇರಿಕೊಂಡು ತನ್ನ ಮಗ ಸಿದ್ಧಪ್ಪ (ಸಿದ್ದೇಗೌಡ) ನ ಹೆಂಡತಿಯನ್ನು ಕರೆದುಕೊಂಡು ಮಠಕ್ಕೆ ಬಂದನು. ಅವನು ಸ್ವಾಮಿಗಳು ಬೆಟ್ಟದಮೇಲೇರಿ ಕುಳಿತಿರುವುದೆಂಬುದನ್ನು ಮಠದ ಜನಗಳಿಂದ ತಿಳಿದು ಸ್ವಾಮಿಗಳು ಕುಳಿತಲ್ಲಿಗೆ ಸೊಸೆಯೊಡನೆ ನೇರವಾಗಿ ಹೋದ. ಸ್ವಾಮಿಗಳು ತಾವೇ ತಾವಾಗಿ ನಿರ್ಲಿಪ್ತತೆಯಿಂದ ಕುಳಿತಿದ್ದರು. ಸಿದ್ಧೇಗೌಡ ಸೊಸೆಯೊಡನೆ ಸ್ವಾಮಿಗಳವರಿಗೆ ನಮಸ್ಕರಿಸಿ ನಿಂತ. 'ಏನು ಏನು, ಯಾವೂರು

---

34) ಈಗ ಈ ಕಲ್ಲು ಬಂಡೆಯಾವುದೆಂಬುದರ ಪರಿಚಯ ಮಠದಲ್ಲಿ ಯಾರಿಗೂ ಇಲ್ಲ.

35) ತುಮಕೂರಿನಿಂದ ಉತ್ತರಕ್ಕೆ ಆರೇಳುಮೈಲುಗಳ ಅಂತರದಲ್ಲಿ ಶಿರಾಕ್ಕೆ ಹೋಗುವ ದಾರಿಯಿಂದ ಪೂರ್ವ ದಿಗ್ಭಾಗದಲ್ಲಿರುವ ಒಂದು ಊರು.

ಯಾವೂರು ? ಏನು ಬಂದುದ್ದು ? ಏನು ? ....[36] ಇತ್ಯಾದಿಯಾಗಿ ಕೇಳಿದರು.
'ಸ್ವಾಮಿ ದೇವರುಕೊಟ್ಟಂತೆ ಎಲ್ಲಾ ಭ್ಯಾಗ್ಯ ಇದೆ. ಇಗೋ ಇವಳೇ ನನ್ನ ಸೊಸೆ
ನನ್ನ ಮಗ ಸಿದ್ದೇಗೌಡನ ಹೆಂಡತಿ. ಮದುವೆಯಾಗಿ ಅನೇಕ ವರ್ಷಗಳಾಗಿಹೋಗಿವೆ,
ಮೊಮ್ಮಕ್ಕಳನ್ನು ಕಾಣುವ ಭಾಗ್ಯ ನನ್ನ ಹಣೆಯಲ್ಲಿ ಬರೆಯಲಿಲ್ಲ. ಅದಕ್ಕಾಗಿ
ಸ್ವಾಮಿಯ ಸನ್ನಿಧಿಗೆ ಬಂದಿದ್ದೇನೆ. ಇಷ್ಟೆ ಇಷ್ಟೆಯೋ ! ಹೋಗು ಹೋಗು ದಾಸೋ
ಹಕ್ಕೆ ಹತ್ತು ಕಂಡುಗ ಹತ್ತು ಕಂಡುಗ ರಾಗಿ ತಂದು ಹಾಕು ಹೋಗು ಎಂದರು
ಸ್ವಾಮಿಗಳು. ಭೀಮೇಗೌಡನೇನು ಸಾಮಾನ್ಯನಲ್ಲ ಅವನಿಗೂ ಭಕ್ತನ ಕೆಚ್ಚು ಇದ್ದ
ಮನುಷ್ಯ. 'ಇಷ್ಟೆಯೋ ಸ್ವಾಮಿ, ತಂದುಹಾಕುತ್ತೇನೆ ನಿಮ್ಮ ಮಾತು ಸುಳ್ಳಾದರೆ ?''
ಎಂದ. ಸ್ವಾಮಿಗಳು ಅವನನ್ನೂ ಅವನ ಸೊಸೆಯನ್ನು ದಿಟ್ಟಿಸಿನೋಡಿ 'ಸಿದ್ಧ
ಲಿಂಗೇಶ ಎಲ್ಲಾ ಎಲ್ಲಾ ಸುಖ ಮಾಡುತ್ತಾನೆ. ಗಂಗಾಸ್ನಾನ ಮಾಡಿಸಿ ಪ್ರಸಾದ
ತಕ್ಕೊಂಡು ಹೊರಡು ಹೊರಡು, ಊರಿಗೆ ಹೋಗಿ ರಾಗಿ ತಂದು ಹಾಕು; ರಾಗಿ
ತಂದು ಹಾಕು' ಎಂದುಬಿಟ್ಟರು. ಭೀಮೇಗೌಡ, ಶ್ರೀಗಳವರು ಹೇಳಿದಂತೆ ಗಂಗಾ
ಸ್ನಾನವನ್ನು ಸೊಸೆಗೆ ಮಾಡಿಸಿ ಪೂಜೆ ಮುಗಿಸಿಕೊಂಡು ಊಟಮಾಡಿ ಗಾಡಿಕಟ್ಟಿ
ಕೊಂಡು ಊರಿಗೆ ಬಂದನು. ಊರಿಗೆ ಬಂದಮೇಲೆ ಶ್ರೀ ಮಠಕ್ಕೆ ಶ್ರೀಗಳವರು
ಹೇಳಿದಂತೆ ಹತ್ತು ಕಂಡುಗ ರಾಗಿಯನ್ನು ನ್ಯಾಯವಾಗಿ ಅಳೆದು ಭಯಭಕ್ತಿಯಿಂದ
ಮಠಕ್ಕೆ ಅರ್ಪಿಸಿ ಹೋದ. ಮುಂದೆ ಒಂದು ವರ್ಷದಲ್ಲಿ ಗಂಡುಮಗುವೊಂದು
ಸೊಸೆಯ ಹೊಟ್ಟೆಯಲ್ಲಿ ಹುಟ್ಟಿತು. ಮಗುವಿಗೆ ಸಿದ್ಧಲಿಂಗೇಗೌಡ ಎಂದು ಹೆಸರಿಟ್ಟು
ಮೊಮ್ಮಗ ಮಗ, ಸೊಸೆಯರೊಡನೆ ಶ್ರೀ ಕ್ಷೇತ್ರಕ್ಕೆ ಪುನಃ ಇನ್ನಷ್ಟು ರಾಗಿಯನ್ನು
ಹೇರಿಕೊಂಡು ಬಂದು ಅರ್ಪಿಸಿ ಸ್ವಾಮಿಗಳವರ ದರ್ಶನಾಶೀರ್ವಾದ ಪಡೆದನು.
ಮುಂದೆ ಅವರೇ ಸಿದ್ಧಲಿಂಗೇಶ್ವರರ ಜಾತ್ರೆಯಲ್ಲಿ ಒಂದು ಕೊಪ್ಪಲನ್ನು ಕಟ್ಟಿಸಿ ಜನ
ರಿಗೆ ಊಟೋಪಚಾರದ ವ್ಯವಸ್ಥೆ ಮಾಡಿಸತೊಡಗಿದರು. ಈಗಲೂ ಈ ಕೊಪ್ಪಲಿಗೆ
ಮೆಳೆಹಳ್ಳಿ ಕೊಪ್ಪಲು ಎಂದೇ ಕರೆಯಲಾಗುತ್ತಿದೆ. ಈ ಮೆಳೆಹಳ್ಳಿಯವರ ಸೇವೆ
ನಾನಾ ಮುಖದಲ್ಲಿ ಮಠಕ್ಕೆ ಈಗಲೂ ಸಂದಾಯವಾಗುತ್ತಲೇ ಇದೆ.

(ಕರ್ನಕುಪ್ಪೆ ಛೇರ್‌ಮನ್ ರೇವಣ್ಣನವರು ಹೇಳಿದ್ದು ವಯಸ್ಸು ಸುಮಾರು 85)

---

36) ಚಿಕ್ಕ ಚಿಕ್ಕ ಮಾತುಗಳನ್ನು ಎರಡೆರಡು ಮೂರು ಮೂರು ಸಲ ಮಾತನಾಡು
ವುದು ಸ್ವಾಮಿಗಳವರ ಮಾತಿನ ಒಂದು ಶೈಲಿ.

ತುಮಕೂರು ತಾಲ್ಲೂಕಿನಲ್ಲಿ 'ಕರ್ನಕುಪ್ಪೆ ಪಾಳ್ಯ' ಎಂಬ ಊರಿದೆ. ಇದಕ್ಕೆ ಮಾಯಮ್ಮನ ಪಾಳ್ಯವೆಂದೂ ಕರೆಯಲಾಗುತ್ತದೆ. ಅಲ್ಲಿ ಮರಿಯಪ್ಪನೆಂಬ ಒಬ್ಬ ರೈತ ಒಂದು ಹುಣಸೇಮರದ ತೋಪು ಬೆಳೆಸಿದ್ದ. ಉದ್ದಾನ ಶಿವಯೋಗಿಗಳು ಕರ್ನಕುಪ್ಪೆಗೆ ಭಿಕ್ಷಾಟನೆಗೆ ಬಂದು ಅಲ್ಲಿಯ ಕಾರ್ಯ ಮುಗಿಸಿಕೊಂಡು ಕರ್ನಕುಪ್ಪೆ ವೀರೇಗೌಡರೊಡನೆ ಕುದುರೆಯಮೇಲೆ ಬೇರೆ ಊರಿಗೆ ಪ್ರಯಾಣ ಬೆಳೆಸುವಾಗ ಆ ಹುಣಸೇಮರದ ತೋಪಿನ ಹತ್ತಿರಕ್ಕೆ ಬಂದರು. ಆ ಹುಣಸೇಮರಗಳನ್ನು ಬೆಳೆಸಿದ್ದ ರೈತನಾದ ಮರಿಯಪ್ಪ ಅಲ್ಲಿಯೆ ಇದ್ದ. ಸ್ವಾಮಿಗಳು ಆ ತೋಪಿನಹತ್ತಿರ ಕುದುರೆಯನ್ನು ತಟ್ಟನೆ ನಿಲ್ಲಿಸಿದರು: ರೈತ ಓಡಿಬಂದು ಸ್ವಾಮಿಗೆ ನಮಸ್ಕರಿಸಿದ. ಯಾರ ಮರ ಯಾರ ಮರ ಇವೆಲ್ಲ ಎಂದರು. ಮರಿಯಪ್ಪ 'ಸ್ವಾಮಿ, ಇವೆಲ್ಲ ನಾನು ಬೆಳೆದವು. ಇಷ್ಟು ದೊಡ್ಡ ಮರವಾದರೂ ಕಾಯಿಲ್ಲ, ಕಸರಿಲ್ಲ ಈ ವರ್ಷ ಎಲ್ಲವನ್ನು ಕಡಿಸಿಹಾಕಿಬಿಡುತ್ತೇನೆ ಎಂದ. ಆಗ ಸ್ವಾಮಿಗಳು 'ಆ ಮರಗಳನ್ನೆಲ್ಲ ದಿಟ್ಟಿಸಿ ನೋಡಿ, ಈ ವರ್ಷ ಬಿಡುವ ಫಸಲನ್ನೆಲ್ಲ ದಾಸೋಹಕ್ಕೆ ತಂದು ಹಾಕಿಬಿಡು' ಕಡಿಸಬೇಡ ಒಳ್ಳೆಯಮರ ಮುಂದೆ ಸಿದ್ಧಲಿಂಗೇಶ ಸುಖ ಮಾಡತ್ತಾನೆ. ಎಂದು ಹೇಳಲೊಡನೆ ಅವನು 'ಸ್ವಾಮಿ, ಕಾಯಿ ಬಿಟ್ಟರಲ್ಲವೆ ದಾಸೋಹಕ್ಕೆ ತಂದು ಹಾಕೋದು' ಎಂದ 'ಹಾಕು ಹಾಕು ನಮಸ್ಕಾರ ಹಾಕು ಕಾಯಿಬಿಡುತ್ತೇ ಬಿಡುತ್ತೆ; ತಿಳಿಯಿತಿಲ್ವೆ ಮಠಕ್ಕೆ ಫಸಲು ತಂದು ಹಾಕೋದನ್ನು ಮರೆಯಬೇಡ ಮರೆಯಬೇಡ; ಎಂದರು. ಅದರಂತೆಹೇಳಿ ಮರಿಯಪ್ಪ ನಮಸ್ಕಾರ ಹಾಕಿದ. ಅದೇನು ಅದ್ಭುತವೋ ಆ ವರ್ಷ ಎಲೆಗೊಂದು ಕಾಯಿ ಬಿಟ್ಟು ಮರಗಳು ಬೀರಿನಿಂತವು. ಶ್ರೀಗಳವರು ಅಪ್ಪಣೆ ಕೊಡಿಸಿದಂತೆ ಆ ವರ್ಷದ ಎಲ್ಲ ಹುಣಸೇಹಣ್ಣನ್ನು ಬಡಿದು ತಂದು ಮಠಕ್ಕೆ ಹಾಕಿದ. ಶ್ರೀಗಳವರ ದೃಷ್ಟಿಪರುಷಶಕ್ತಿ ಅದ್ಭುತವಾಗಿತ್ತು.

(ಕರ್ನಕುಪ್ಪೆ ಛೇರ್‌ಮನ್ ರೇವಣ್ಣನವರು, ಹೇಳಿದ್ದು ವಯಸ್ಸು ಸುಮಾರು 85)

(ಮುಂದುವರಿಯುವುದು)

---

## ಪುಸ್ತಕ ವಿಮರ್ಶೆ

—ಕೆ. ವಿರೂಪಾಕ್ಷಗೌಡ

ನಮ್ಮ ಪತ್ರಿಕೆಗಳಿಗೆ ಪುಸ್ತಕವ ಕಳಿಸಿದರೆ
''ಸಾದಾರ ಸ್ವೀಕಾರ'' ಮಾತ್ರ ಗತಿಯು
ಪುಸ್ತಕದ ಒಳ ತಿರುಳು, ಹಿತವುಂಟೋ ? ಅಹಿತವೋ ?
ಕಳಿಸಿದವ ಬದುಕಿಹನು ಅದೇಚ್ಯುತಿಯು.

# ಸಿದ್ಧಗಂಗಾ ಸಿದ್ಧ ಗುರು

—ದೇ. ಜವರೇಗೌಡ

ಕರ್ನಾಟಕದ ಶಿವಶರಣರ ಚರಿತ್ರೆಯಲ್ಲಿ ಹಾಗೂ ಅಧ್ಯಾತ್ಮ ಕ್ಷೇತ್ರದಲ್ಲಿ ಸಿದ್ಧ ಗಂಗೆಗೆ, ಅದರ ಹೆಸರೇ ಸೂಚಿಸುವಂತೆ, ಪವಿತ್ರ ಸ್ಥಾನವಿದೆ. ನೂರಾರು ವರ್ಷ ಗಳಿಂದ ನಾಡಿನ ಶಿವಶರಣರು ಅಲ್ಲಿಗೆ ಬಂದು ಹೋಗುತ್ತಿರುವುದು ಮಾತ್ರವಲ್ಲ, ಅಲ್ಲಿ ನಿಂತು ತಪಗೈದು ಮುಕ್ತಿಶ್ರೀಯನ್ನಾಲಿಂಗಿಸಿದ್ದಾರೆ. ಅವರ ತಪಸ್ಸೇ ಮೂರ್ತಿವೆತ್ತಂತೆ, ಅವರು ತಪೋಮಗ್ನರಾಗಿದ್ದಂತೆಯೇ ಶಿಲಾವತಾರವೆತ್ತಿದಂತೆ, ಯಾತ್ರಾರ್ಥಿಗಳನ್ನು ಸನ್ನೆಗೈದು, ಸನಿಹಕ್ಕೆ ಕರೆದು, ಆಶೀರ್ವಾದ ಮಾಡುವಂತೆ ಕಂಗೊಳಿಸುತ್ತಿರುವ ಬಂಡೆ ಹೆಬ್ಬಂಡೆಗಳ ನಡುವೆ ಹುದುಗಿರುವ ಆಶ್ರಮ ಬಹುಕಾಲದಿಂದ ದುಃಖಾರ್ತರನ್ನು ಸಾಂತ್ವನಗೊಳಿಸುತ್ತ, ಜ್ಞಾನಾರ್ಥಿಗಳನ್ನು ತೃಪ್ತಿಪಡಿಸುತ್ತ, ಮುಮುಕ್ಷುಗಳ ಬಯಕೆ ಯನ್ನು ಈಡೇರಿಸುತ್ತಿದೆ. ಅಲ್ಲಿಯ ಪರಿಸರದ ಪ್ರತಿಯೊಂದು ಸಚರಾಚರ ವಸ್ತುವೂ, ಮಣ್ಣಿನ ಕಣಕಣವೂ ಶಿವಧ್ಯಾನದಲ್ಲಿ ಮಗ್ನವಾದಂತೆ ತೋರುತ್ತಿವೆ.

ಕನ್ನಡನಾಡಿನ ಶೈಕ್ಷಣಿಕ ಇತಿಹಾಸದಲ್ಲಿ ಸಿದ್ಧಗಂಗೆಗೆ ವಿಶಿಷ್ಟಸ್ಥಾನವಿದೆ. ಜ್ಞಾನಪ್ರಸಾರಕ್ಕಾಗಲೀ ಶೈಕ್ಷಣಿಕ ಪ್ರಗತಿಗಾಗಲೀ ಸರ್ಕಾರವೊಂದನ್ನೇ ಹೊಣೆಮಾಡು ವುದು ತರವಲ್ಲ. ಸರ್ಕಾರದಿಂದಲೇ ಅವು ಸಾಧ್ಯ, ಅವು ಸಮರ್ಪಕವಾಗಿ ಕೈಗೂಡು ತ್ತವೆ ಎನ್ನುವ ನಿರೀಕ್ಷೆಯೂ ಸುಳ್ಳಾಗುವ ಸಂಭವವುಂಟು. ಶಿಕ್ಷಣವನ್ನು ವಿಕೇಂದ್ರೀ ಕರಣಗೊಳಿಸಿ, ಅದನ್ನು ಖಾಸಗಿ ಕ್ಷೇತ್ರಕ್ಕೆ ವಹಿಸಿದಷ್ಟು ಅದರ ಮಟ್ಟ ಎತ್ತರವಾಗು ತ್ತದೆ, ಅದು ಸರ್ವರಿಗೂ ಸಮನಾಗಿ ಸಿಗುವಂತಾಗುತ್ತದೆ, ಜ್ಞಾನಪ್ರಸಾರ ವ್ಯಾಪಕ ವಾಗಿಯೂ ಸುಲಭವಾಗಿಯೂ ಸಾಗುವಂತಾಗುತ್ತದೆ, ಅಷ್ಟೇ ಅಲ್ಲ ಜ್ಞಾನವಿಕಾಸ ವಿಶ್ವತೋಮುಖವಾಗಿ ಹಾಗೂ ಸಾರ್ಥಕವಾಗಿ ವೃದ್ಧಿಹೊಂದುತ್ತದೆ ಎನ್ನುವುದಕ್ಕೆ ಮುಂದುವರಿದಿರುವ ಪಾಶ್ಚಾತ್ಯ ರಾಷ್ಟ್ರಗಳೇ ಸಾಕ್ಷಿಯಾಗಿವೆ. ಕರ್ನಾಟಕದಲ್ಲಿ ಶಿಕ್ಷಣದ ಮುನ್ನಡೆಗೆ ಸಿದ್ಧಗಂಗಾ ಮಠದಂಥ ಖಾಸಗಿ ಸಂಸ್ಥೆಗಳು ಸಲ್ಲಿಸಿರುವ ಕಾಣಿಕೆ ಅಮೋಘ ವಾದದ್ದು. ಕೇವಲ ಸರ್ಕಾರದ ಕೈಯನ್ನು ಮಾತ್ರ ಕಾಯ್ದಿದ್ದರೆ ಶಿಕ್ಷಣ ಇಂದಿನಷ್ಟು ವ್ಯಾಪಕವಾಗಿ ಹರಡುತ್ತಿರಲಿಲ್ಲ. ಶ್ರೀಮಂತರಿಂದ ಧನಸಹಾಯ ಪಡೆದು ಅದನ್ನು ಸದ್ವಿನಿಯೋಗ ಮಾಡುವುದು ಮಠಗಳ ಒಂದು ಸದುದ್ದೇಶವಾದರೆ, ಶಿಕ್ಷಣ ಪ್ರಸಾರವೂ ಅವುಗಳ ಪ್ರಮುಖ ಕಾರ್ಯಕ್ರಮಗಳಲ್ಲೊಂದಾಗಿದೆ.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಚಾಲ್ತಿಯಲ್ಲಿರುವ ಶಿಕ್ಷಣ ಸಂಸ್ಥೆಗಳ ಅಳತೆಯ ದೃಷ್ಟಿಯಿಂದ ಸಿದ್ಧಗಂಗಾ ಮಠವೇ ಒಂದು ವಿಶ್ವವಿದ್ಯಾಲಯವಾಗಿದೆ. ಇಂಜಿನಿಯರಿಂಗ್ ಕಾಲೇಜು, ಪ್ರಥಮದರ್ಜೆ ಕಾಲೇಜು, ಶಿಕ್ಷಕರ ತರಬೇತಿ ಕಾಲೇಜು, ಸಂಸ್ಕೃತ ಕಾಲೇಜು ಇಂಥವೇ ಹಲವಾರು ಕಾಲೇಜುಗಳು ಈ ಮಠದ ಆಶ್ರಯದಲ್ಲಿ ನಡೆಯುತ್ತಿವೆ. ಸರ್ಕಾರಿ ಕಾಲೇಜುಗಳು ಸಹ ನಾಚುವಂತೆ ಶ್ರೀಮಠ ಕಣ್ಣೋರೈಸುವಂಥ ಕಟ್ಟಡಗಳನ್ನು ಕಟ್ಟಿದೆ, ಪ್ರಯೋಗಾಲಯಗಳನ್ನು ಅಣಿಗೊಳಿಸಿದೆ, ಸೌಲ್ಯಭ್ಯಾನುಕೂಲಗಳನ್ನು ಸೃಷ್ಟಿಸಿದೆ. ಜತೆಗೆ ಅನೇಕ ವಿದ್ಯಾರ್ಥಿಗಳಿಗೆ ಉಚಿತ ಭೋಜನ ವಸತಿ ಸೌಕರ್ಯಗಳನ್ನು ಸಹ ಒದಗಿಸಿದೆ. ವಿದ್ಯಾರ್ಥಿಗಳಂತು ನಾಡಿನ ನಾನಾಭಾಗಗಳಿಂದ ಬಂದು ಸೇರಿ, ಆ ವಿದ್ಯಾಕ್ಷೇತ್ರವನ್ನು ಮಿನಿ ಭಾರತವನ್ನಾಗಿ ಪರಿವರ್ತಿಸಿದ್ದಾರೆ. ಆಶ್ರಮದ ವಾತಾವರಣದಿಂದಾಗಿ ಕಾಲೇಜುಗಳ ಆವರಣದಲ್ಲಿ ಸದಾ ಶಾಂತಿ ತಾಂಡವವಾಡುತ್ತಿರುತ್ತದೆ.

ಮಹಾಸಿದ್ಧಿಗೆ ಮಹಾಸಾಧನೆ ಅತ್ಯಗತ್ಯವಷ್ಟೆ. ಸಿದ್ಧಗಂಗಾ ಕ್ಷೇತ್ರವನ್ನಾಗಲೀ, ಪರಿಸರದ ವಿದ್ಯಾ ಕ್ಷೇತ್ರವನ್ನಾಗಲೀ ನೋಡಿದಾಗ ಆ ಸಿದ್ಧಿಯ ಹಿಂದಿರುವ ತಪೋವೈಭವವನ್ನು, ಅದಕ್ಕೆ ಕಾರಣಭೂತವಾದ ಸಿದ್ಧಪುರುಷರ ವ್ಯಕ್ತಿತ್ವವನ್ನು ಸುಲಭವಾಗಿ ಊಹಿಸಿಕೊಳ್ಳಬಹುದು. ಜನಸಾಮಾನ್ಯರ ದೃಷ್ಟಿಯಲ್ಲಿ ನಮ್ಮಲ್ಲಿರುವ ವಿಶ್ವವಿದ್ಯಾಲಯಗಳು ನಾಲ್ಕು; ನಾಲ್ವರು ಕುಲಪತಿಗಳು; ನಿಜವಾಗಿಯೂ ನಮ್ಮಲ್ಲಿ ಹತ್ತಾರು ವಿಶ್ವವಿದ್ಯಾಲಯಗಳಿವೆ; ಅನಭಿಷಿಕ್ತ ಕುಲಪತಿಗಳೂ ಅಷ್ಟೇ ಮಂದಿ ಇದ್ದಾರೆ. ಅವರು ಬರಿಯ ಕುಲಪತಿಗಳಲ್ಲ, ಮಹಾಶಿಲ್ಪಿಗಳೂ ಅಹುದು. ಅವರಲ್ಲೊಬ್ಬರು ಸಿದ್ಧಗಂಗಾ ಮಠಾಧೀಶರಾದ ಶ್ರೀ ಶ್ರೀ ಶಿವಕುಮಾರ ಮಹಾ ಸ್ವಾಮಿಗಳವರು. ಅವರು ಶ್ರೀಸಾಮಾನ್ಯರ ದೀನದಲಿತರ ಗ್ರಾಮೀಣ ಜನರ ಹಿತೈಷಿಗಳಾದ್ದರಿಂದ ಅವರ ಹೆಸರಿನ ಹಿಂದೆ ಯಾವ ಉಪಾಧಿಗಳನ್ನು ಹಚ್ಚದೆ, ಅವರನ್ನು ಶ್ರೀ ಶಿವಕುಮಾರ ಸ್ವಾಮಿಗಳೆಂದೇ ಕರೆಯಬಹುದು.

ಸ್ವಾಮಿಗಳೆಂತು ಕಠಿನವಿರಕ್ತರೋ ಅಂತೆಯೇ ನಿಷ್ಕಾಮಂತ ಕಾಯಕ ಯೋಗಿಗಳೂ ಅಹುದು. ಅವರು ತಪಸ್ವಿಗಳು ಮಾತ್ರವಲ್ಲ, ಮಹಾ ವಿದ್ವಾಂಸರು ಅಹುದು. ಅವರು ಮೂಗುಹಿಡಿದುಕೊಂಡು, ಜನಸಮೂಹದಿಂದ ದೂರವಾಗಿ, ಮಠಬಂಡೆಗಳ ನಡುವೆ ಮರೆಯಾದವರಲ್ಲ, ಸಂತೆಯ ಗಲಿಬಿಲಿಯ ನಡುವಿದ್ದುಕೊಂಡು ವೀರವ್ರತಿಯೆನಿಸಿಕೊಂಡವರು; ತಾವೊಬ್ಬರು ಮುಕ್ತರಾದರೆ ಸಾಲದು, ತಮ್ಮ ಸುತ್ತಮುತ್ತಣ ಜನವೂ ಮೋಕ್ಷಗಾಮಿಗಳಾಗಬೇಕೆಂದು ಬಯಸಿ, ಅವರ ಸರ್ವತೋಮುಖವಾದ ಏಳ್ಗೆಗಾಗಿ ದುಡಿದವರು. ನಮ್ಮ ನಾಡಿನ ಪ್ರಗತಿಗೆ ಕಾಯಕವೊಂದೇ ರಾಜಮಾರ್ಗವೆಂದು ಬಗೆದವರು; ಬಗೆದವರು ಮಾತ್ರವಲ್ಲ, ಸ್ವಾನುಷ್ಠಾನದ ಮೂಲಕ ನೆರೆಹೊರೆಯವರಿಗೆ

ದಾರಿದೀಪವಾದವರು. ಸೂಜಿಗಲ್ಲಿನಂತೆ ಭಕ್ತವೃಂದವನ್ನು ಆಕರ್ಷಿಸಿ, ಅವರಿಂದ ಸರ್ವಜನೋಪಯುಕ್ತವಾದ ಧರ್ಮಕಾರ್ಯಗಳನ್ನು ಮಾಡಿಸಿಕೊಂಡು ಮಹಾ ಸಂಸ್ಥೆಗಳನ್ನು ನಿರ್ಮಾಣಗೈದ ಮಹಾ ಸಾಹಸಿಯವರು.

ವಿರಕ್ತ ಸಮುದಾಯದಲ್ಲಿರಲಿ, ಲೌಕಿಕದಲ್ಲಿಯಾದರೂ ಸರಿಯೇ, ಕರ್ತೃತ್ವ ಶಕ್ತಿಯಲ್ಲಿ ಅವರನ್ನು ಮೀರಿಸುವ ಸಾಹಸಿಗಳು ವಿರಳರೆಂದೇ ಹೇಳಬೇಕು. ವರ್ಷಕ್ಕೊಮ್ಮೆ ಅಭೂತಪೂರ್ವವೆನ್ನುವಂತೆ ನಡೆಯುವ ಜಾತ್ರೆಯ ವೈಭವವೇ ಆ ಶಕ್ತಿಗೆ ಸಾಕ್ಷಿಯಾಗಿದೆ. 1966ರಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನವನ್ನು ನೋಡಿದವರ, ಅಥವಾ ಅದರಲ್ಲಿ ಪಾಲ್ಗೊಂಡವರ ನೆನಹು ಮಾಸಿಲ್ಲವೆಂದೇ ಹೇಳಬಹುದು. ಪ್ರತಿಯೊಂದು ಕಾರ್ಯಕ್ರಮದಲ್ಲಿಯೂ ಕಾಣುತ್ತಿದ್ದ ಶಿಸ್ತು, ಅಚ್ಚುಕಟ್ಟು, ರುಚಿಗಳು ಕಲಾರಾಧನೆಗೆ ತಕ್ಕಂತಿದ್ದುವು. ಯಾವ ಕಡೆಗೆ ಕಣ್ಣು ಹೊರಳಿಸಿದರೂ ಅನನುಕರಣೀಯವಾದ ವ್ಯವಸ್ಥೆ ನೋಡಿದವರ ಮನಸ್ಸಿನಲ್ಲಿ ದಿಗ್ಭ್ರಮೆಯುಂಟುಮಾಡುವಂತಿತ್ತು. ಸಭೆಯಾಗಲೀ, ಗೋಷ್ಠಿಯಾಗಲೀ, ವಸತಿ ಸೌಕರ್ಯವಾಗಲೀ, ಭೋಜನ ವ್ಯವಸ್ಥೆಯಾಗಲೀ ಎಲ್ಲೆಲ್ಲಿಯೂ ಅವರ ತಪಸ್ಸಿನ ಪ್ರಭಾವ ಅಚ್ಚೊತ್ತಿದಂತಿರುತ್ತಿತ್ತು.

ಕರ್ತೃತ್ವ ಶಕ್ತಿಯಂತೆಯೇ ಅವರ ವಕ್ತೃತ್ವಸಾಮರ್ಥ್ಯವೂ ಒಂದು ಮಹಾಪೂರದಂತಿದೆ. ಅವರು ಭಾಷಣ ಪ್ರಾರಂಭ ಮಾಡುವುದೆ ತಡ, ನಿರರ್ಗಳವಾಗಿ ಹರಿಯುತ್ತದೆ. ಸಾಮಾನ್ಯವಾಗಿ ತಾರಸ್ಥಾಯಿಯಲ್ಲಿ ಹೊರಹೊಮ್ಮುವ ಅವರ ದನಿ ಮೊದಲಿಂದ ಕೊನೆಯತನಕ ಏರಿಳಿತಗಳಿಲ್ಲದೆ ಏಕಪ್ರಕಾರವಾಗಿರುತ್ತದೆ. ವಿಷಯಕ್ಕಾಗಿ ಅವರು ತಡಕಾಡುವುದಿಲ್ಲ, ಮಾತಿಗಾಗಿ ಮುಲುಕುವುದಿಲ್ಲ. ವಿಷಯದ ವಿಶದತೆಯಿಂದಾಗಿ, ಅಭಿವ್ಯಕ್ತಿಯ ಸ್ಪಷ್ಟತೆಯಿಂದಾಗಿ ಅವರು ಎಂಥ ಸಭೆಯನ್ನಾದರೂ ತಲೆದೂಗಿಸಬಲ್ಲರು.

ಸ್ವಾಮೀಜಿಯವರು ದೈಹಿಕವಾಗಿ ಎಂತು ಆಜಾನುಬಾಹುಗಳೋ ಬೌದ್ಧಿಕವಾಗಿಯೂ ಉನ್ನತ ವ್ಯಕ್ತಿಗಳಾಗಿದ್ದಾರೆ. ತಮ್ಮ ಔನ್ನತ್ಯವನ್ನು ಪ್ರದರ್ಶಿಸುವ ಇಚ್ಛೆ ಇಲ್ಲದೆಯೋ, ತಮ್ಮ ಭಕ್ತವೃಂದದ ಪುಣ್ಯ ಪಾಪಗಳ ಹೊಣೆಗಾರಿಕೆಯನ್ನು ತಾವೇ ಹೊತ್ತುಕೊಂಡಿರುವುದಕ್ಕೋ ಎನ್ನುವಂತೆ ಅವರ ತಲೆ ಯಾವಾಗಲೂ ಬಾಗಿರುತ್ತದೆ. ಅವರ ದೃಷ್ಟಿ ಸದಾ ಅಂತರ್ಮುಖಿಯಾಗಿರುವಂತೆ ಅವರ ನೇತ್ರಗಳ ರಚನೆಯಿಂದ ಅಭಿವ್ಯಕ್ತವಾಗುತ್ತದೆ. ಅವರನ್ನು ನೋಡಿದಾಗಲೆಲ್ಲ

ನೀರಿಗೆ ನೈದಿಲೆ ಶೃಂಗಾರ, ಸಮುದ್ರಕ್ಕೆ ತೆರೆಯೇ ಶೃಂಗಾರ;
ನಾರಿಗೆ ಗುಣವೇ ಶೃಂಗಾರ, ಗಗನಕ್ಕೆ ಚಂದ್ರಮನೇ ಶೃಂಗಾರ;

ನಮ್ಮ ಕೂಡಲ ಸಂಗನ ಶರಣರಿಗೆ
ನೊಸಲ ವಿಭೂತಿಯೇ ಶೃಂಗಾರ

ಎಂಬ ಬಸವಣ್ಣನವರ ವಚನ ನೆನಪಿಗೆ ಬರುತ್ತದೆ. ಅಷ್ಟೇ ಅಲ್ಲ 'ಕೂಡಲ ಸಂಗನ ಶರಣನ ಕಾಯವೇ ಕೈಲಾಸವೆನ್ನುವ ಮಾತು ಸಹ ಇಂಥ ಹಿರಿಯ ವ್ಯಕ್ತಿಗಳನ್ನು ಕಂಡಾಗ ಹೊರಹೊಮ್ಮಿದಂತೆ ತೋರುತ್ತದೆ. ಕನ್ನಡ ನಾಡಿಗೆ ಹಾಗೂ ಕರ್ನಾಟಕ ಸಂಸ್ಕೃತಿಗೆ ಪ್ರತ್ಯಕ್ಷವಾಗಿ, ಪರೋಕ್ಷವಾಗಿ, ನಾನಾ ಪ್ರಕಾರಗಳಲ್ಲಿ ಅವರಿಂದ ಸಂದಿರುವ ಸೇವೆ ಅತ್ಯಮೂಲ್ಯವೆಂಬುದನ್ನು ಕನ್ನಡ ಜನ ಸದಾ ನೆನೆಯಬೇಕಾದ್ದು ಧರ್ಮ. ಕನ್ನಡ ಜನತೆಯ ಪರವಾಗಿ ಕರ್ನಾಟಕ ವಿಶ್ವವಿದ್ಯಾಲಯ ಅವರನ್ನು ಡಾಕ್ಟೊರೇಟ್ ಪದವಿ ನೀಡುವುದರ ಮೂಲಕ ಸನ್ಮಾನಿಸಿದ್ದು ಸರ್ವೋಚಿತವೆಂದೇ ಈ ಸಂದರ್ಭದಲ್ಲಿ ಸ್ಮರಿಸಬಹುದಾಗಿದೆ.

ಹೃದಯಂ ಸದಯಂ ಯಸ್ಯ ಭಾಷಿತಂ ಸತ್ಯಭೂಷಿತಂ
ಕಾಯಃ ಪರಹಿತೋಪಾಯಃ ಕಲಿಃ ಕುರ್ವೀತ ತಸ್ಯ ಕಿಮ್ ॥

ಈ ಮಾತು ಸ್ವಾಮೀಜಿಯವರಿಗೆ ಅಕ್ಷರಶಃ ಅನ್ವಯಿಸುತ್ತದೆ. ಅಂಥವರ ಸಂಪರ್ಕದಿಂದ ಪಾಪ ನಶಿಸಿ, ಪುಣ್ಯಲಾಭವಾಗುತ್ತದೆ. ಅವರು ಪ್ರೀತಿಯಿಂದ ಮಾತಾಡಿಸಿದರೆ ಸಾಕು, ಹೃದಯದ ಅಂಧಕಾರವಳಿಯುತ್ತದೆ.

ತಮಾಂಸಿ ಧ್ವಂಸತೇ ಪರಿಣಮತಿ ಭೂಯಾನುಪಶಮಃ
ಸಕೃತ್ಸಂವಾದೇऽಪಿ ಪ್ರಥತ ಇಹ ಚಾಮುತ್ರ ಚ ಶುಭಂ
ಅಥ ಪ್ರತ್ಯಾಸಂಗಃ ಕಮಪಿ ಮಹಿಮಾನಂ ವಿತತಿರ
ಪ್ರಸನ್ನಾನಾಂ ವಾಚಃ ಫಲಮಪರಿಮೇಯಂ ಪ್ರಸುವತೇ ॥

---

## ಭಜಿಸುವೆ ಬಾರೋ ಗುರುದೇವಾ

ಜಾನಪದ ಭಜನೆ

—ಕೆ. ವಿರೂಪಾಕ್ಷಗೌಡ

ಭಜಿ ಭಜಿಸುವೆ ಬಾರೋ ಗುರುದೇವಾ। ಕರುಣ ಸಾಗರ ಸುಗುಣನೆ
ಸಾಕುಮಾಡು ಈ ಲೋಕದೊಳಗೆ ಇರಲಾರೆನು ।ಪ॥
ಮೋಕ್ಷಮಾರ್ಗವನ್ನು ಬೇಡಿ ಪಕ್ಷಿ ನಾನು ಬಳಲುವೆನು।
ಸ್ಥೂಲ, ಸೂಕ್ಷ್ಮದಿ, ಕಾರಣ, ತೋರಿದಿ। ಓಂಕಾರಿಯ ಮಹಿಮ ತಿಳಿಸಿದಿ॥
ಷಣ್ಮುಖ ಸಾಂಬ ನಿಷ್ಕಳ ನಿಜಮುಖ। ಓಂ ಎರಡಕ್ಷರ ಶಸಿಧರನೆ॥
ಸತ್ಯ ಶರಣರ ಮಾತಿಗಾಗಿ ಮನಸೋತೆನೊ॥
ಆತನ ಜ್ಞಾನದಿಂದ ಪರಬ್ರಹ್ಮಗ ದೃಷ್ಟಿ ಇಟ್ಟೆನೊ
ಆಧಾರ ಮೊದಲು ಆರು ಚಕ್ರದೊಳ್। ಅಷ್ಟದಳಂಗಳೆಲ್ಲ ಈಶ್ವರದೊಳಗೆ॥

# ಗಾಂಧೀಜಿಯವರ ಬಗ್ಗೆ ಕೆಲವು ಸ್ವಾರಸ್ಯಕರ ಸಂಗತಿಗಳು

—ಎನ್. ಪಂಕಜ

ಗಾಂಧೀಜಿಗೆ ಸೋಮಾರಿತನ ಎಂಬುವುದು ಸ್ವಲ್ಪವೂ ಇರಲಿಲ್ಲ. "ಮನುಷ್ಯ ಆದಷ್ಟೂ ಸ್ವಾವಲಂಬಿಯಾಗಬೇಕು, ಪ್ರತಿಯೊಂದು ಕೆಲಸವನ್ನು ಕಲಿತರಬೇಕು- ಮತ್ತು ತನ್ನ ಎಲ್ಲಾ ಕೆಲಸಗಳನ್ನೂ ತಾನೇ ಮಾಡಿಕೊಳ್ಳಬೇಕು" ಹೇಳುತ್ತಿದ್ದರು. ಮತ್ತು ತಾವು ಹೇಳಿದ್ದನ್ನು ಮಾಡಿ ತೋರಿಸುತ್ತಿದ್ದರು.

ಅವರು ದಕ್ಷಿಣ ಆಫ್ರಿಕಾದಲ್ಲಿ ಬ್ಯಾರಿಸ್ಟರಾಗಿದ್ದಾಗ, ಒಳ್ಳೆ ಯುರೋಪಿಯನ್ನರಂತೆಯೇ ವೇಷಭೂಷಣದೊಂದಿಗೆ ಕೋರ್ಟಿಗೆ ಹೋಗುತ್ತಿದ್ದರು. ಅವರ ಷರಟಿಗೆ ಹೊಂದುವಂತೆ ಪ್ರತಿನಿತ್ಯ ಒಂದು ಶುಚಿಯಾದ ಕಾಲರ್ ಬೇಕಾಗುತ್ತಿತ್ತಂತೆ, ದಿನಾಲು ಕಾಲರನ್ನು ಬದಲಾಯಿಸುತ್ತಿದ್ದರು. ಇದರಿಂದಾಗಿ ದೋಬಿಯ ಖರ್ಚು ಜಾಸ್ತಿಯಾಯಿತ್ತು; ಕೊಡುವುದು ಕಷ್ಟವಾಯಿತು, ಆದಷ್ಟು ತಮ್ಮ ಖರ್ಚುಗಳನ್ನು ಇಳಿಸಿಕೊಳ್ಳಬೇಕೆಂದು ಮನಸ್ಸು ಮಾಡಿದರು. ಷರಟು, ಕಾಲರು, ಇತ್ಯಾದಿಗಳನ್ನು ಒಗೆಯುವ ವಿಧಾನವನ್ನು ತಿಳಿಸುವ ಒಂದು ಪುಸ್ತಕ ಸಿಕ್ಕಿತು-ಕೊಂಡರು-ಓದಿದರು. ಸರಿ, ಮನೆಯಲ್ಲೇ ತಮ್ಮ ಬಟ್ಟೆಗಳನ್ನೆಲ್ಲಾ ಒಗೆಯಲು ಆರಂಭಿಸಿದರು. ಕಸ್ತೂರಿಬಾರವರಿಗೂ ಹೇಳಿಕೊಟ್ಟರು.

ಒಂದು ದಿನ ಗಾಂಧೀಜಿಯವರು ತಮ್ಮ ಷರಟಿನ ಕಾಲರನ್ನು ಒಗೆದು ಗಂಜಿ ಹಾಕಿದರು, ಮತ್ತೆ ಮನೆಯಲ್ಲೇ ತಾವೇ ಇಸ್ತ್ರಿ ಮಾಡಿದರು. ಇಸ್ತ್ರಿ ಮಾಡಿ ಅಭ್ಯಾಸವಿಲ್ಲದ ಕಾರಣ, ಗಂಜಿ ಜಾಸ್ತಿಯಾದ ಕಾರಣ ಆ ಕಾಲರ್ ನೆಟ್ಟಗೆ ನಿಂತಿತಂತೆ. ಅದನ್ನು ಹಾಕಿಕೊಂಡು ಅವರು ಕೋರ್ಟಿಗೆ ಹೋದಾಗ, ಸ್ನೇಹಿತರು ಸುಮ್ಮನಿರುತ್ತಾರೆಯೇ ? ಅವರನ್ನು ಗೇಲಿಮಾಡಿದರು. ಗಾಂಧೀಜಿಯವರು ಮನಸ್ಸಿಗೆ ತಂದುಕೊಳ್ಳಲಿಲ್ಲ. "ಇದೇ ನನ್ನ ಮೊದಲ ಪ್ರಯತ್ನ-ಅದಕ್ಕೆ ಹೀಗಿದೆ. ನೋಡಿಕೊಂಡಿರಿ ಕಲಿತು, ಈ ಕೆಲಸದಲ್ಲಿ ಪ್ರವೀಣನಾಗಿ ಬಿಡ್ತೀನೆ ಅಂದರಂತೆ."

"ಯಾಕೆ, ನಿಮ್ಮ ಮನೆಯ ಹತ್ರ ಲ್ಯಾಂಡ್ರಿ ಯಾವುದೂ ಇಲ್ಲವೇ ?" – ಒಬ್ಬ ಸ್ನೇಹಿತ ಕೇಳಿದನಂತೆ.

"ಇದೆ... ಆದರೆ ಬಹಳ ಹಣ ತಗೋತಾರೆ. ಅವರಿಗೆ ಹಣ ಸುರಿಯೋದಕ್ಕಿಂತ, ನಮ್ಮ ಬಟ್ಟೆಗಳನ್ನು ನಾವೇ ಒಗೆದುಕೊಳ್ಳೋದು ವಾಸಿ ಅನ್ಸುತ್ತೆ"–ಗಾಂಧೀಜಿ ಅಂದರಂತೆ.

ಕೆಲವೇ ದಿನಗಳಲ್ಲಿ ಗಾಂಧೀಜಿ ನಿಜವಾಗಿಯೂ ಬಟ್ಟೆ ಒಗೆಯುವುದರಲ್ಲಿ ಪ್ರವೀಣರಾಗಿಯೇ ಬಿಟ್ಟರು ! ಸ್ನೇಹಿತರಿಗೆಲ್ಲಾ ಆಶ್ಚರ್ಯ.

ಗೋಖಲೆಯು ಒಂದು ಸಲ ಬಂದು ಗಾಂಧೀಜಿಯುವರಲ್ಲಿ ಇಳಿದುಕೊಂಡಾಗ ಈ ಬಗ್ಗೆ ಒಂದು ಸ್ವಾರಸ್ಯಕರವಾದ ಪ್ರಸಂಗ ನಡೆಯಿತು. ಗೋಖಲೆಯವರನ್ನು ಕಂಡರೆ ಗಾಂಧೀಜಿಗೆ ಬಲು ಆದರ....ಅವರನ್ನು ತಮ್ಮ ಗುರು ಎಂತಲೇ ಭಾವಿಸಿದ್ದರು. ಗೋಖಲೆಯವರು ತುರ್ತಾಗಿ ಯಾವುದೋ ಪಾರ್ಟಿಗೆ ಹೋಗಬೇಕಿತ್ತು. ಅವರು ಹಾಕಿಕೊಳ್ಳಬೇಕಾಗಿದ್ದ ಬಟ್ಟೆ ಕೊಳೆಯಾಗಿ ಸುಕ್ಕಾಗಿತ್ತು. ಗಾಂಧೀಜಿಯವರು ಸ್ವತಃ ಅದನ್ನು ಒಗೆದು, ಇಸ್ತ್ರಿ ಮಾಡಿಕೊಟ್ಟಾಗ ಅವರಿಗಾದ ಆನಂದ–ಆಶ್ಚರ್ಯ ಹೇಳತೀರದು !

ದಕ್ಷಿಣ ಆಫ್ರಿಕಾದಲ್ಲಿನ ಅವರ ಆಶ್ರಮದಲ್ಲಿ ನೀರೇ ಇರುತ್ತಿರಲಿಲ್ಲ. ಹೆಣ್ಣು ಮಕ್ಕಳು ಬಲು ದೂರ ಹೋಗಿ, ಬಟ್ಟೆಗಳನ್ನು ಒಗೆದುಕೊಂಡು ಬರಬೇಕಿತ್ತು. ಗಾಂಧೀಜಿ ಅವರಿಗೆಲ್ಲಾ ಸಹಾಯ ಮಾಡುತ್ತಿದ್ದರು. ಕಸ್ತೂರಿಬಾರವರಿಗೆ ಖಾಯಿಲೆ ಬಂದು, ಜೈಲಿನಲ್ಲಿದ್ದಾಗ, ಅವರ ಬಟ್ಟೆಗಳನ್ನು ಯಾರಿಗೂ ಕೊಡದೆ, ತಾವೇ ಶುಭ್ರವಾಗಿ ಒಗೆದು, ಬಿಸಿಲಲ್ಲಿ ಒಣಗಿಹಾಕುತ್ತಿದ್ದರೆಂದು ಪ್ರತೀತಿ. ಮತ್ತು ತಾವು ಧರಿಸುವುದು ಎರಡೇ ಬಟ್ಟೆಯಾದರೂ, ಅದನ್ನು ಶುಚಿಯಾಗಿ ಫಳಫಳ ಎಂದು ಇಟ್ಟುಕೊಳ್ಳುತ್ತಿದ್ದರು.

ಅಷ್ಟೇ ಅಲ್ಲ, ಗಾಂಧೀಜಿಯುವರು ಬಟ್ಟೆಗಳನ್ನು ಸಹ ಬಹಳ ಚೆನ್ನಾಗಿ ಹೊಲಿಯುತ್ತಿದ್ದರು. ಜೈಲಿನಲ್ಲಿದ್ದಾಗ ರಿಪೇರಿಯ ಕೆಲಸಗಳನ್ನು ಮಾಡಬೇಕಿತ್ತಂತೆ. ಅವರಿಗೆ ಕೊಟ್ಟಿದ್ದ ಕಾಲಾವಧಿಗೂ ಮುಂಚೆ ರಿಪೇರಿಯ ಕೆಲಸಗಳನ್ನು ಮಾಡಿಮುಗಿಸಿ, ಮತ್ತೂ ಕೊಡಿರೆಂದು ಕೇಳುತ್ತಿದ್ದರಂತೆ! ಅಲ್ಲಿದ್ದಾಗ, ಅಲ್ಲಿನ ಜೈಲಿನ ಸೂಪರಿಡೆಂಟರಿಗೆ, ತಾವೇ ನೇಯ್ದು, ಕೊನೆಗೆ ಹೊಲಿದಿದ್ದ ಖಾದಿ ಕೈವಸ್ತ್ರಗಳನ್ನು ಅವರ ಹುಟ್ಟಿದ ಹಬ್ಬಕ್ಕೆ ಕೊಟ್ಟರಂತೆ ! ಮತ್ತು ಪ್ರತಿ ಕೈವಸ್ತ್ರದ ಕೊನೆಯಲ್ಲೂ ಆ ಸೂಪರಿಡೆಂಟರ ಹೆಸರಿನ ಇನಿಷಿಯಲ್‌ಗಳನ್ನು ಕಲಾತ್ಮಕವಾಗಿ ಕಸೂತಿ ಮಾಡಿದ್ದರು ಬೇರೆ !

ಗಾಂಧೀಜಿಯವರ ಪ್ರಿಯವಾದ ಶಾಲು ಹರಿದಿತ್ತು, ಅದಕ್ಕೆ ಯೋಗ್ಯವಾದ ಖಾದಿಚೂರುಗಳಿಂದ, ಕಲಾತ್ಮಕವಾಗಿ ಹೊಲಿಯುವಂತೆ ಅವರು ತಮ್ಮ ಆಶ್ರಮದವರಿಗೆ ಹೇಳಿಕೊಟ್ಟು, ಅದೇ ಶಾಲನ್ನು ಧರಿಸಿ, ಇಂಗ್ಲೆಂಡಿನಲ್ಲಿ ನಡೆದ ದುಂಡುಮೇಜಿನ ಸಭೆಯಲ್ಲಿ ಭಾಗವಹಿಸಿದ್ದರಂತೆ. ಬ್ರಿಟನ್ನಿನ ಮುಖ್ಯಮಂತ್ರಿಯ ಪಕ್ಕದಲ್ಲಿ ಕುಳಿತು ! ಮತ್ತೆ ಆಮೇಲೆ ಅದೇ ಶಾಲನ್ನು ಹೊದೆದು, ಇಂಗ್ಲೆಂಡಿನ ರಾಜರ ಅರಮನೆಯಿಂದ ಬಕಿಂಗ್‌ಹ್ಯಾಮ್ ಪ್ಯಾಲಸ್‌ಗೆ ಸಹ ಹೋಗಿದ್ದರಂತೆ ! ಗಾಂಧೀಜಿಯವರು

ಯಾವತ್ತೂ ಶೋಗೆ (ಥಳಕಿಗೆ) ಪ್ರಾಧಾನ್ಯತೆ ಕೊಡುತ್ತಿರಲಿಲ್ಲ. ಆದರೆ ಕೊ
ಯಾದ ಹರಿದ ಬಟ್ಟೆಬರೆಗಳನ್ನು ಸಹಿಸುತ್ತಿರಲಿಲ್ಲ. ಒಂದು ಭಾರಿ, ತಮ್ಮ
ಯಲ್ಲಿ ಒಬ್ಬಾತ ಸ್ವಲ್ಪ ಹರಿದ ಖಾದಿಬಟ್ಟೆಯನುನ್ನು ಧರಿಸಿದ್ದನ್ನು ಕಂಡರಂತೆ
ತಕ್ಷಣ ಅವನಿಗೆ ಕಾಗದ ಬರೆದರಂತೆ "ಇಂತಹ ಬಟ್ಟೆಗಳನ್ನು ಹಾಕಿಕೊಳ್ಳುವುದು
ಸೋಮಾರಿತನದ ಲಕ್ಷಣ ! ರಿಪೇರಿ ಮಾಡಿ ಹಾಕಿಕೊಳ್ಳುವುದರಲ್ಲಿ ಅವಮಾನ
ವೇನಿಲ್ಲ"....ಎಂದು !

ಗಾಂಧೀಜಿಯವರು ಚಪ್ಪಲಿಗಳನ್ನು ಸಹ ಹೊಲಿಯುತ್ತಿದ್ದರು ! ಜೈಲಿನಲ್ಲಿ
ದ್ದಾಗ ಬೇಕಾದಷ್ಟು ಹೊಲಿದರು, ಮತ್ತು ತಮ್ಮ ಜೊತೆಯಲ್ಲಿದ್ದವರಿಗೂ ಹೇಳಿ
ಕೊಟ್ಟರು, ಮತ್ತು ತಾವಾಗಿ ಸತ್ತ ಪ್ರಾಣಿಗಳ ಚರ್ಮಗಳನ್ನು ಮಾತ್ರ ಉಪಯೋಗಿ
ಸಲು ನಿರ್ಧರಿಸಿದರು. ಆದರಿಂದ ಅವರು ಮಾಡುವ ಚಪ್ಪಲಿಗಳಿಗೆ 'ಅಹಿಂಸಕ
ಚಪ್ಪಲಿಗಳು' ಎಂಬ ಹೆಸರು ಬಂತು.

ಗಾಂಧೀಜಿಯವರು ದಕ್ಷಿಣ ಆಫ್ರಿಕಾದಲ್ಲಿದ್ದಾಗ ಅವರನ್ನು ಜೈಲಿಗೆ ಹಾಕಿ
ದವರು ಜನರಲ್ ಸ್ಮಟ್ಸ್ ಎಂಬ ಅಲ್ಲಿಯ ಸರ್ವಾಧಿಕಾರಿ. ಅವರಿಗೆ ಗಾಂಧೀಜಿ
ಯವರು ತಾವೇ ಕೈಯಲ್ಲಿ ಮಾಡಿದ ಒಂದು ಜೊತೆ ಚಪ್ಪಲಿಗಳನ್ನು ಕೊಟ್ಟರು.
"ಅಂತಹ ಮಹಾನುಭಾವನ ಕಾಲು ಹಿಡಿಯುವ ಯೋಗ್ಯತೆ ಇಲ್ಲ ನನಗೆ—ಈಗ-
ವರು ಮಾಡಿಕೊಟ್ಟಿರುವ ಚಪ್ಪಲಿಯಲ್ಲಿ ಸುತ್ತಾಡುವೆ"....ಗಾಂಧೀಜಿಯವರ ಎಪ್ಪತ್ತ
ನೆಯ ಹುಟ್ಟಿದ ಹಬ್ಬದಂದು, ಜನರಲ್ ಸ್ಮಟ್ಸ್ ಬರೆದರಂತೆ.

ಇಷ್ಟೇ ಅಲ್ಲ, ಗಾಂಧೀಜಿಯವರು ಬಹಳ ಚೆನ್ನಾಗಿ ಅಡಿಗೆ ಮಾಡುತ್ತಿದ್ದರು.
ಖಾಯಿಲೆಯಾದವರಿಗೆ ವೈದ್ಯಕೀಯ ಮಾಡುತ್ತಿದ್ದರು ; ಚರಕದಿಂದ ನೂಲು
ತೆಗೆಯುತ್ತಿದ್ದರು. ಅದರಿಂದ ಬಟ್ಟೆ ನೆಯುತ್ತಿದ್ದರು. ಭಂಗಿಯ ಕೆಲಸವನ್ನಂತೂ
ಸ್ವಲ್ಪವೂ ಜಿಗುಪ್ಸೆಯಿಲ್ಲದೆ ಮಾಡುತ್ತಿದ್ದರು.

ಜನರನ್ನೆಲ್ಲಾ ಕೂಡಿಸಿ, ಸ್ವದೇಶ ಪ್ರೇಮವನ್ನು ಅವರಲ್ಲಿ ತುಂಬಿಸಿ ನಮ್ಮ
ದೇಶದಿಂದ ಪರಕೀಯರನ್ನು ಓಡಿಸಿದರು ನಮ್ಮ ಬಾಪೂ.

# ಕೃಷಿ ಗಾದೆಗಳು

—ಎಚ್. ಎಸ್. ಸಿದ್ದಗಂಗಪ್ಪ

ಮಾನವನ ಉಗಮದಷ್ಟೇ ಪ್ರಾಚೀನ ಗಾದೆಗಳು; ಅವನು ಭಾಷೆಯನ್ನು ಬಳಸುವುದಕ್ಕೆ ಪ್ರಾರಂಭಿಸಿದಾಗಲೇ ಗಾದೆಗಳು ಉಗಮವಾಯಿತೆನ್ನಬಹುದು. ಗಾದೆಗಳು ಜನಸಾಮಾನ್ಯರ ಬದುಕು ಭಾಷೆಗಳಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿರುವುದಲ್ಲದೆ, ಅದಕ್ಕೆ ಶಕ್ತಿಯನ್ನು ಸಂಪನ್ನತೆಯನ್ನು ತಂದುಕೊಟ್ಟಿದೆ. ಗಾದೆಗಳು ಊಟಕ್ಕೆ ಉಪ್ಪಿನಕಾಯಿ ಇದ್ದಂತೆ, "ಉಪ್ಪಿನಕಾಯಿ ಊಟಕ್ಕೆ ವ್ಯಂಜಕವಾದರೆ ಗಾದೆ ಮಾತಿಗೆ ವ್ಯಂಜಕವಾಗುತ್ತದೆ" ಎಂಬ ಮಾತು ಗಮನಾರ್ಹ. ಹಳ್ಳಿಗಳಲ್ಲಿ ಜನ ಮಾತನಾಡುವಾಗ ಸಮಯ ಸಂದರ್ಭಕ್ಕೆ ಹೊಂದಿಕೊಳ್ಳುವಂತೆ ಗಾದೆಗಳನ್ನು ಹೇಳಿ ಹೇಳಬೇಕಾಗಿರುವ ವಿಷಯಕ್ಕೆ ಒತ್ತುಕೊಡುತ್ತಾರೆ, ಅವರಿಗೆ ಸಂದರ್ಭಕ್ಕನುಗುಣವಾಗಿ ಗಾದೆಗಳು ಬಾರದೆ ಮರೆತು ಹೋದಾಗ ಥಟ್ಟನೆ ಮಾತಿನ ಮಧ್ಯೆ 'ಏನೋ ಗಾದೆ ಹೇಳ್ದಂಗೆ' 'ಏನೋ ಹೇಳ್ದಂಗೆ' ಎಂದು ಹೇಳಿ ಗಾದೆಗಳನ್ನು ಪರೋಕ್ಷವಾಗಿ ತಮಗರಿವಿಲ್ಲದಂತೆ ಬಳಸುವುದನ್ನು ಇಂದೂ ಗಮನಿಸುತ್ತೇವೆ. ಗಾದೆಗಳ ಮೂಲಕ ಹೇಳುವ ಮಾತು ಥಟ್ಟನೆ ಅರಿವಾಗುತ್ತದೆ. ಅವು ಆಕಾರದಲ್ಲಿ ವಾಮನನಂತಿದ್ದರೂ ಅರ್ಥದಲ್ಲಿ ತ್ರಿವಿಕ್ರಮನಂತಿರುತ್ತವೆ.

ಗಾದೆಗಳ ಸೃಷ್ಟಿಕರ್ತ ಇಂಥವನೇ ಎಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ 'ಹಲವರ ಜ್ಞಾನ ಒಬ್ಬನ ಬುದ್ಧಿವಂತಿಕೆ' ಯಿಂದ ಹುಟ್ಟಿಕೊಂಡವುಗಳು–ಯಾವುದೋ ಸಂದರ್ಭದಲ್ಲಿ, ಸಂಕಟದಲ್ಲಿ, ಸಂತೋಷದಲ್ಲಿ, ನಗೆಯಲ್ಲಿ, ಹಾಸ್ಯದಲ್ಲಿ, ಥಟ್ಟನೆ ಹಾರಿದ ಕಿಡಿನುಡಿಗಳು. ಇವು ಸಾರ್ವತ್ರಿಕವಾಗಿ ಜನಮನ್ನಣೆಯನ್ನು ಪಡೆದುಕೊಂಡು ಚಲಾವಣೆಗೆ ಬಂದಾಗ ಗಾದೆಗಳಾಗುತ್ತವೆ. ಈ ಗಾದೆಗಳು ಒಬ್ಬರ ಸ್ವತ್ತಾಗದೆ, ಜನರಿಂದ ಜನರಿಗೆ, ಪೀಳಿಗೆಯಿಂದ ಪೀಳಿಗೆಗೆ, ಪರಂಪರಾನುಗತವಾಗಿ ಹರಿದುಬಂದಿವೆ. 'ಬೆಳ್ಳಗಿರುವುದೆಲ್ಲ ಹಾಲಲ್ಲ', 'ಅತಿ ಆಸೆ ಗತಿಗೇಡು', 'ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು', 'ಹಾಸಿಗೆ ಇದ್ದಷ್ಟು ಕಾಲು ಚಾಚು'–ಮುಂತಾದ ಗಾದೆಗಳು ಯಾರ ಸೃಷ್ಟಿಯೋ, ಯಾರ ಅನುಭವದ ಅಭಿವ್ಯಕ್ತಿಯೋ, ಯಾವ ಕಾಲದ್ದೋ ಗೊತ್ತಿಲ್ಲ. ಆದರೆ ಅವುಗಳ ಪರಿಣಾಮ, ಅರ್ಥವಂತಿಕೆ, ನೀಡುವ ಜ್ಞಾನ, ಎಚ್ಚರಿಕೆ ವಿಶಿಷ್ಟವಾದುದು. ಇಂತಹ ಗಾದೆಗಳು ವ್ಯಕ್ತಿಯೊಬ್ಬನ ಸ್ವತ್ತಾಗದೆ, ಇಡೀ ಸಮಾಜದ ಸ್ವತ್ತಾಗುತ್ತದೆ.

ಗಾದೆಗಳಿಂದ ಒಂದು ರಾಷ್ಟ್ರದ ಅಥವಾ ಒಂದು ನಾಡಿನ ಸಾಂಸ್ಕೃತಿಕ, ಸಾಮಾಜಿಕ ಜನಜೀವನವನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುತ್ತದೆ. ಏಕೆಂದರೆ "ಗಾದೆಗಳು ಜನಜೀವನದ ಸ್ವಭಾವಕ್ಕೆ ಹಿಡಿದ ಕನ್ನಡಿ", 'ಗಾದೆ ವೇದಕ್ಕೆ ಸಮಾನ', 'ವೇದ ಸುಳ್ಳಾದರೂ ಗಾದೆ ಸುಳ್ಳಾಗದು' ಎಂಬ ಜನಪ್ರಿಯ ನಾಣ್ನುಡಿಗಳು ಗಾದೆಗಳ ಮಹತ್ವವನ್ನು ಪರಿಚಯಮಾಡಿಕೊಡುತ್ತವೆ. ಒಂದು ರೀತಿಯಲ್ಲಿ ಗಾದೆಗಳು ಚಲಾವಣೆಯ ನಾಣ್ಯವಿದ್ದಂತೆ. ಆದರೆ ನಾಣ್ಯಕ್ಕೆ ಸರ್ಕಾರದ ಮುದ್ರೆ ಇರುವತನಕ, ಚಲಾವಣೆಯಲ್ಲಿರುತ್ತದೆ. ಗಾದೆಗಳಿಗೆ ಯಾವ ಸರ್ಕಾರದ ಮುದ್ರೆಯ ಆವಶ್ಯಕತೆಯೂ ಇಲ್ಲ. ಗ್ರಾಮೀಣದ ಬದುಕಿನುದ್ದಕ್ಕೂ ಚಲಾವಣೆಯಾಗುತ್ತಲೇ ಇರುತ್ತದೆ.

(ಕನ್ನಡನಾಡು ಕೃಷಿ ಪ್ರಧಾನವಾದಬೀಡು. ಬಹುತೇಕ ಗ್ರಾಮೀಣರೇ ಹೆಚ್ಚಾಗಿ ವಾಸಿಸುವ ಈ ನಾಡಿನಲ್ಲಿ ವ್ಯವಸಾಯವೇ ಮುಖ್ಯ ಕಸುಬು. ಕೃಷಿ ಜೀವನಕ್ಕೆ ಸಂಬಂಧಿಸಿದಂತೆ ನೂರಾರು ಗಾದೆಗಳು ಬಳಕೆಯಲ್ಲಿವೆ. ಒಂದೊಂದು ಗಾದೆಯನ್ನೂ, 'ಹಿಂಜಿ ಹಿಂಜಿ' ನೋಡಿದಾಗ ಅದರಲ್ಲಿ ಅಡಕವಾಗಿರುವ ತತ್ತ್ವ ಮಹತ್ವ. ಹಾಗು ವೈಶಾಲ್ಯತೆಯ ಪರಿಚಯವಾಗುತ್ತದೆ.

ನಮ್ಮ ಗ್ರಾಮೀಣರು ಸ್ವತಂತ್ರ ಪ್ರವೃತ್ತಿಯುಳ್ಳವರು. ಮೇಲಾಗಿ ಸ್ವಾವಲಂಬಿಗಳು. ರಟ್ಟೆಯಲ್ಲಿ ಬಲವಿರುವವರೆಗೂ ಭೂಮಿತಾಯಿಗೆ ತಮ್ಮ ರಕ್ತವನ್ನು ಬಸಿದು ದುಡಿದು ತಿನ್ನಬೇಕೆಂಬ ಛಲವಾದಿಗಳು. ತಾವು ಸುಖವಾಗಿರುವುದಲ್ಲದೆ ತಮ್ಮನ್ನು ನಂಬಿದವರು ಸುಖವಾಗಿರುವಂತೆ ನೋಡಿಕೊಳ್ಳಬೇಕೆಂಬ ಮನೋಭಾವ ಉಳ್ಳವರು. ಅವರ ದೃಷ್ಟಿಯಲ್ಲಿ ಕಾಲಕಾಲಕ್ಕೆ ಹದವರಿತು, ಉತ್ತುಬಿತ್ತುವುದೇ ಸರಿಯಾದ ವಿದ್ಯೆ ಆದಕ್ಕೇ ಇರಬೇಕು ನಮ್ಮ ಹಿರಿಯರು "ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಗೆ ಪ್ರಾಧಾನ್ಯತೆಯನ್ನು ಕೊಟ್ಟಿರುವರು. ಈ ಹೇಳಿಕೆಯನ್ನು ಸರ್ವಜ್ಞನೂ ಸಮರ್ಥಿಸಿದ್ದಾನೆ. ಇಂಥ ಅತ್ಯುನ್ನತ ವಿದ್ಯೆಯನ್ನು ಕರಗತ ಮಾಡಿಕೊಂಡಿರುವ ರೈತರು ನಾಡಿನ ರಾಷ್ಟ್ರದ ಬುನಾದಿ.

ಕೃಷಿ ಜೀವನ ಪ್ರಾರಂಭವಾಗುವುದು ಸಾಮಾನ್ಯವಾಗಿ ಯುಗಾದಿ ಹಬ್ಬದಿಂದ. ಇಲ್ಲಿಂದ ಮುಂಗಾರು ಪ್ರಾರಂಭ. ಯುಗಾದಿಯ ನಂತರ ಶುಭಮುಹೂರ್ತದಲ್ಲಿ ಮನೆಯಲ್ಲಿ ಯಾರಿಗೆ ಗ್ರಹಬಲ ಚೆನ್ನಾಗಿರುತ್ತದೆಯೋ, ಅವರಿಂದ ನೇಗಿಲನ್ನು ಹೂಡಿಸಿ ಪೂಜೆಮಾಡಿಸಿ ಹೊಸ ವರುಷದ ಕೃಷಿ ಕಾರ್ಯವನ್ನು ಪ್ರಾರಂಭಿಸುವುದು ಹಿಂದಿನಿಂದಲೂ ನಡೆದುಬಂದ ಸಂಪ್ರದಾಯ. ಈ ಕಾರ್ಯವನ್ನು ಕೆಲವುಕಡೆ ಯುಗಾದಿಯ ಮರುದಿನ ಸಾಮೂಹಿಕವಾಗಿ ಮಾಡುವುದುಂಟು. ಇದಕ್ಕೆ 'ಹೊನ್ನಾರು'

ಎಂದು ಕರೆಯುತ್ತಾರೆ. ಇದು ಆ ವರ್ಷದ ಕೃಷಿ ಕಾರ್ಯಕ್ಕೆ 'ಉದ್ಘಾಟನಾ' ಸಮಾರಂಭವಿದ್ದಂತೆ.

ಮುಂಗೋಳಿ ಕೂಗಿ ಮೂಡು ಕೆಂಪೇರಿ ಬೆಳ್ಳನೆ ಬೆಳಕಾಗುವ ಮುನ್ನವೇ ಎದ್ದು ವ್ಯವಸಾಯ ಸಾಮಗ್ರಿಗಳೊಡನೆ ಮನೆಬಿಟ್ಟು ನೇಗಿಲ ಯೋಗಿಗಳು ತಮ್ಮ ದಿನ ನಿತ್ಯದ ಬಹುತೇಕ ವೇಳೆಯನ್ನು ಕಳೆಯುವುದು ನಿಸರ್ಗದ ಮಡಿಲಲ್ಲಿ. ಬೆಳಿಗ್ಗೆ ಎದ್ದಾಗ ಮೊದಲು ನೆನೆಯುವುದು ಎಳ್ಳು ಜೀರಿಗೆ ಬೆಳೆಯುವ ಭೂಮಿತಾಯಿ ಯನ್ನು. ಮಳೆರಾಯನನ್ನು.

ಸಾಮಾನ್ಯವಾಗಿ ಯುಗಾದಿಯ ಹಿಂದು ಮುಂದಿನ ದಿನಗಳಲ್ಲಿ ಮಳೆಯಾಗುವ ಸಂಭವ ಉಂಟು. ಹಳ್ಳಕೊಳ್ಳಗಳು ತುಂಬಿ ಹರಿಯುವಂತೆ ಬಿರುಮಳೆ ಬೀಳ ದಿದ್ದರೂ, ಭೂಮಿಯ ಮೇಲಿನ ಧೂಳಡಗುವಂತೆ ಮಳೆಬಿದ್ದರೆ ಸಾಕು. ಅವರಿಗೆ ಅದೆಷ್ಟೋ ನೆಮ್ಮದಿ. ಮಳೆ ಕಾಲ ಕಾಲಕ್ಕೆ ಬಿದ್ದರೆ ವ್ಯವಸಾಯವೂ ಸುಗಮ. ಇದರ ಮೇಲೆಯೇ ರೈತರ ಭವಿಷ್ಯ ಅವಲಂಬಿತವಾಗಿರುತ್ತದೆ.

ಮಳೆಗೆ ಸಂಬಂಧಿಸಿದಂತೆ ನೂರಾರು ಗಾದೆಗಳು ಬಳಕೆಯಲ್ಲಿವೆ, ಇವು ರೈತ ರಿಗೆ ಎಚ್ಚರಿಕೆಯನ್ನು ತಿಳುವಳಿಕೆಯನ್ನು ನೀಡುವ ಮಾರ್ಗ ಸೂಚಿ. 'ಅಶ್ವಿನಿ ಮಳೆಯಲ್ಲಿ ಬಿತ್ತಿದರೆ ಸರ್ವನಾಶ' ಎಂಬ ಗಾದೆಯಿದೆ. ಅಶ್ವಿನಿ ಪ್ರಾರಂಭದ ಮಳೆ ಈ ಸಮಯದಲ್ಲಿ ಒಂದೆರಡು ಬಾರಿ ಚೆನ್ನಾಗಿ ಉತ್ತು ಮಣ್ಣು ಮಾಗಲು ಬಿಡ ಬೇಕೆ ಹೊರತು ಬಿತ್ತಬಾರದು ಎನ್ನುವುದನ್ನು ತಿಳಿಸುತ್ತದೆ. ಆದರೆ ಕೃಷಿ ವಿಜ್ಞಾನ ಪ್ರಗತಿಯಿಂದ ಈಗ ಏನೇನೋ ಸಾಧ್ಯವಾಗಿದೆ.

ಭರಣಿ ಮಳೆ ಆದಕಡೆ ಬೆಳೆ ಚೆನ್ನಾಗಿ ಆಗುವುದೆಂಬ ಪ್ರತೀತಿ. ಇದು ಸಂಮೃದ್ಧಿಯ ಸಂಕೇತವೆಂದು ಭಾವಿಸಿದ್ದಾರೆ. ಹೊಲವನ್ನು ಮತ್ತೆ ಮತ್ತೆ ಉತ್ತು ಬಿತ್ತನೆಗೆ ಯೋಗ್ಯವಾದ ರೀತಿಯಲ್ಲಿ ಹಸನುಮಾಡಲು ಭರಣಿ ತುಂಬ ಪ್ರಯೋಜನ ಕಾರಿ. 'ಭರಣಿ ಮಳೆ ಧರಣಿಗಂಡ', 'ಭರಣಿ ಮಳೆ ಸುರಿದು ಧರಣಿ ಬದುಕ್ತು' ಇತ್ಯಾದಿ ಗಾದೆಗಳು ಭರಣಿ ಮಳೆಯ ಹಿರಿಮೆಯನ್ನು ತಿಳಿಸುತ್ತವೆ. 'ಭರಣಿ ಮಳೆ ಬಿದ್ರೆ ಧರಣಿ ತುಂಬ ಬೆಳೆ.

" ಹದ ನೋಡಿ ಅರಗು ಬೆದೆ ನೋಡಿ ಬಿತ್ತು "

ಹದ ಕಂಡು ಕುಯ್ಲಿಲ್ಲ, ಬೆದೆ ಕಂಡು ಬಿತ್ತಲಿಲ್ಲ — ಈ ಗಾದೆಗಳು ಯಾವ ಸಂದರ್ಭದಲ್ಲಿ ಕೊಯ್ಯಬೇಕು ಎಂಬುದನ್ನು ಸೂಚಿಸುತ್ತವೆ. ಆರಿದ್ರೆ ಮಳೆಯಲ್ಲಿ ಆದಷ್ಟು ಬಿತ್ತು ಎಂದಿದ್ದಾರೆ. ಈ ಮಳೆಯಲ್ಲಿ ಬಿತ್ತಿದರೆ ಬೆಳೆ ಕೈತುಂಬ ಸಿಗುವು ದೆಂಬ ದೃಢ ವಿಶ್ವಾಸ.

ಗೌರಿ ತಿಂಗಳಿನಲ್ಲಿ ರಾಗಿ ಪೈರು ಹುಲುಸಾಗಿ ಬೆಳೆದು ತೆನೆ ಹೊರಡುವ ಸಮಯ. ಆಗ ಮಳೆ ಚೆನ್ನಾಗಿ ಆಗದಿದ್ದರೆ ಆರಂಭದಲ್ಲಿ ಪಟ್ಟ ಶ್ರಮವೆಲ್ಲ ವ್ಯರ್ಥ. ಅದಕ್ಕೆ ರೈತರು ಹಸ್ತೆ ಮಳೆಯನ್ನು ಎದುರು ನೋಡುತ್ತಿರುತ್ತಾರೆ. ಹಸ್ತೆ ಮಳೆ ತೆನೆಕಾಳು ತುಂಬ ಬೆಳೆಯಲು ಸಹಾಯಕಾರಿ. ಹಸ್ತೆ ಮಳೆಯನ್ನು ಕುರಿತು " ಹಸ್ತೆ ಮಳೆ ಬಂದಿದ್ದರೆ ಹೆತ್ತ ತಾಯಿ ಹಿಟ್ಟಿಕ್ಕೋದಿಲ್ಲ" .... ಎಂದಿದ್ದಾರೆ.

ಅನುರಾಧೆ ಮಳೆ ರಾಗಿ ಬೆಳೆಗೆ ತುಂಬ ಆವಶ್ಯಕ. ಅನುರಾಧ ಮಳೆ ಬಿದ್ದರೆ ರಾಗಿ ಬೆಳೆ ಇಮ್ಮಡಿಯಾಗುತ್ತದೆ. 'ಅನುರಾಧ ಬಂದರೆ ನಮ್ಮ ರಾಗಿ ನಮ್ಮದು' ಎನ್ನುವ ಜನ, ಈ ಮಳೆ ಬಂದರೆ ಮೀಸೆಮ್ಯಾಲೆ ಕೈಹಾಕಿ ಮಂದಹಾಸ ಬೀರುತ್ತಾರೆ.

'ಬಂದರೆ ಮಗ, ಹೋದರೆ ಹೊಗೆ'—ಇದು ಮಗ, ಮಳೆಯನ್ನು ಕುರಿತ ಗಾದೆ. ಈ ಮಳೆ ಬಂದ್ರೆ ಕೊಡದಲ್ಲಿ ದಬದಬ ನೀರು ಸುರ್ದಂಗೆ ಬತ್ತದೆ, ಇಲ್ಲದಿದ್ರೆ ಬಿಳಿ ಮೋಡವಾಗಿ ಹೊಗೆಯಂತೆ ಕರಗಿ ಹೋಗುತ್ತದೆ, ಅದೆಂಥ ಕಲ್ಪನೆ.

ಬೆಳೆ ಚೆನ್ನಾಗಿ ಆಗಬೇಕಾದರೆ ಫಲವತ್ತಾದ ಭೂಮಿ ಇರಬೇಕು. ನೂರಾರು ಎಕರೆ ಬಂಜರು ಭೂಮಿಯನ್ನು ಹೊಂದಿರುವುದಕ್ಕಿಂತಲೂ ಫಲವತ್ತಾದ ನಾಲ್ಕಾರು ಎಕರೆ ಭೂಮಿಯಾದರೆ ಸಾಕು. ಅದಕ್ಕೆ 'ಎರೆ ಹೊಲ ಇರಬೇಕು, ಕಪ್ಪು ಹೆಂಡತಿ ಇರಬೇಕು' ಎಂದ ಅವರು 'ತೊರೆ ದಂಡೆಯಲ್ಲಿ ಹೊಲಬೇಡ, ಹೊಳೆ ಆಚೆ ಹೆಣ್ಣು ತರಬೇಡ' ಎಂದು ಎಚ್ಚರಿಕೆಯನ್ನು ನೀಡಿದ್ದಾರೆ.

ಸಾಮಾನ್ಯವಾಗಿ 'ಸ್ವಾತಿ ಮಳೆ ಹೇತಿ ಅಂದ್ರೂ ಬಿಡೋದಿಲ್ಲ'. ಈ ಮಳೆ ಮುಗಿದ ಮೇಲೆ ಸರಿಯಾಗಿ ಭೂಮಿ ಕುಡಿಯುವಷ್ಟು ಹಳ್ಳಕೊಳ್ಳಗಳು ತುಂಬಿ ಹರಿಯುವಷ್ಟು ಮಳೆ ಬರೋದಿಲ್ಲ. ಇದನ್ನು ಗಮನಿಸಿಯೆ 'ಸ್ವಾತಿ ಮಳೆ ಹೋದ ಮೇಲೆ ಯಾತ್ರ ಮಳೆ' ಎಂದಿದ್ದಾರೆ.

'ರೋಹಿಣಿ ಮಳೆಗೆ ಓಣಿಯೆಲ್ಲ ಕೆಸರು'
ರೋಹಿಣಿ ಮಳೆಯಲ್ಲಿ ಓಣಿಯೆಲ್ಲ ಜೋಳ
ವಿಶಾಖಿ ಮಳೆ ಪಿಶಾಚಿ ಹಿಡಿದಹಾಗೆ
ಹುಬ್ಬೆ ಮಳೆಗೆ ಗುಬ್ಬಿತಲೆ ನೆನೆಯದು

ಇದೇ ಗಾದೆಯನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ 'ಹುಬ್ಬೇ ಮಳೆ ಅಜ್ಜಿ ಮೊಲೆ ಉಂಡ ಹಾಗೇ ಎನ್ನುತ್ತಾರೆ. ಹೀಗೆ ಒಂದೇ ಗಾದೆ ಒಂದೇ ನಾಡಿನಲ್ಲಿ ಪ್ರಾದೇಶಿಕ ವ್ಯತ್ಯಾಸದಿಂದ ಕೂಡಿದೆ ಎಂಬುದು ಈ ಗಾದೆಯಿಂದ ವ್ಯಕ್ತವಾಗುತ್ತದೆ.

ರೈತರ ಜೀವನಾಡಿ ಎತ್ತುಗಳು. ಎತ್ತಿಲ್ಲದಿದ್ದರೆ ಅವರ ಕೆಲಸಕಾರ್ಯಗಳೆಲ್ಲ ಬುಡಮೇಲಾಗುತ್ತದೆ. ಇದನ್ನು ಕಂಡೆ 'ಎತ್ತಿಲ್ಲದವನಿಗೆ ಎದೆಯಿಲ್ಲ' ಎಂದಿದ್ದಾರೆ. ಈ ಎತ್ತುಗಳು ಅವರಿಗೆ ಅನ್ನ ಕೊಡುವ ದೇವರು. 'ಗೋವು ಸೇವೆಯೇ ಈಶ ಸೇವೆ' ಎಂದು ನಂಬಿದವರು. ಇಂಥ ಎತ್ತುಗಳನ್ನು ಶ್ರದ್ಧೆಯಿಂದ, ಎಚ್ಚರಿಕೆಯಿಂದ ಕಾಲ ಕಾಲಕ್ಕೆ ಸರಿಯಾಗಿ ಆರೈಕೆ ಮಾಡಬೇಕಾಗುತ್ತದೆ. ಬೆಳಗಿನಿಂದ ಸಂಜೆಯುವರಿಗೂ ಬಿಡುವಿಲ್ಲದೆ ದುಡಿಸಿಕೊಂಡು, ಕಡೆಗಣ್ಣಿನಿಂದ ನೋಡುವವರನ್ನು ಕಂಡು,

'ತಂದ ಹೆಂಡ್ತಿಗೆ ಹಿಟ್ಟು ಹಾಕ್ಲಿಲ್ಲ, ಕಟ್ಟಿದ ಎತ್ತಿಗೆ ಹುಲ್ಲ ಹಾಕ್ಲಿಲ್ಲ' ಎಂದು ವ್ಯಂಗ್ಯವಾಗಿ ಮೂದಲಿಸಿದ್ದಾರೆ.

ತಾವು ಮಾಡುವ ಪ್ರತಿಯೊಂದು ಕೆಲಸವನ್ನು ದೇವರ ಮೇಲೆ ಭಾರಹಾಕಿ ಮಾಡುವ ಇವರು 'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ' ಎಂಬ ಭಗವದ್ಗೀತೆಯ ಸಾರವನ್ನು ತಮ್ಮ ನಿತ್ಯಜೀವನದಲ್ಲಿ ಅಳವಡಿಸಿಕೊಂಡಿರುವ ಗ್ರಾಮೀಣರು 'ಆಗೋದು ಹೋಗೋದು ದೇವರ ಇಚ್ಛೆ, ಉತ್ತೋದು ಬಿತ್ತೋದು ನಮ್ಮಿಚ್ಛೆ' ಎಂದಿದ್ದಾರೆ.

ಯಾವುದೇ ಕೆಲಸವನ್ನು ಮಾಡಬೇಕಾದರೂ ಉತ್ಸಾಹ ಬೇಕು, ಆಸಕ್ತಿಬೇಕು, 'ದುಡಿಮೆಯೆ ದೇವರು' ಎಂದು ಭಾವಿಸಿರುವ ಗ್ರಾಮೀಣರಿಗೆ ಸೋಮಾರಿತನವೆಂದರೆ ಆಗದು. 'ಕುಂತು ಉಣ್ಣೋರಿಗೆ ಕುಡಿಕೆ ಹಣ ಸಾಲದು' ಎಂದು ತಿಳಿದಿರುವ ಅವರಿಗೆ ಮಾತಿಗಿಂತ ಕೆಲಸ ಮುಖ್ಯ. "ಮಾತು ಮನೆ ಕೆಡಿಸ್ತು" ಎನ್ನುವ ಜನ, 'ಬೆದೆ ಬೆದೆ ಬಿಟ್ಟವನ ಬೆಳೆ ಹಾಳು' ಎಂದಿದ್ದಾರೆ. 'ಒಕ್ಕಲಿಗ ಕೂತು ಕೆಟ್ಟ ದೊಂಬ ಆಗಲಿ ಕೆಟ್ಟ' – ಇದು ಸಹ ಸೋಮಾರಿಗಳನ್ನು ಕುರಿತದ್ದೆ. ಹೊಲದಲ್ಲಿ ಕೆಲಸಮಾಡದೆ ಗುಂಪು ಗುಂಪಾಗಿ ಕುಳಿತು ಕಾಡು ಹರಟೆ ಹೊಡೆಯುತ್ತ ಕುಳಿತರೆ ಕೃಷಿ ಕೆಲಸ ಹಾಳಾಗುತ್ತದೆ. ದೊಂಬರು ಒಟ್ಟಿಗೆ ಒಂದೆಡೆ ಸೇರಿ 'ದೊಂಬರಾಟ' ಮಾಡದೆ ಒಬ್ಬೊಬ್ಬ ಒಂದೊಂದು ದಿಕ್ಕಿಗೋದರೆ ಜೀವನ ಸಾಗಿಸುವುದೇ ಸಮಸ್ಯೆಯಾಗುತ್ತದೆ. ಈ ಗಾದೆ ರೈತರಿಗಷ್ಟೇ ಮೀಸಲಲ್ಲ. ಸಮಾಜದಲ್ಲಿರುವ ಸಮಸ್ತರಿಗೂ ಅನ್ವಯವಾಗುವಂತಹದು. ಯಾವ ವ್ಯಕ್ತಿಯೇ ಆಗಲಿ ತಮ್ಮ ವೃತ್ತಿಯ ಬಗ್ಗೆ ಗೌರವ, ಶ್ರದ್ಧೆ ಇಲ್ಲದೆ ಹೋದಾಗ ಎಲ್ಲವೂ ಹಾಳಾಗುತ್ತದೆ ಎಂಬ ಸಂದೇಶವನ್ನು ನೀಡುತ್ತದೆ.

ವ್ಯವಸಾಯ ಮಾಡಬೇಕಾದರೆ ವಿವೇಚನೆಯೂ ಅಗತ್ಯ. ವಾತಾವರಣಕ್ಕನುಗುಣವಾಗಿ ವ್ಯವಸಾಯ ಮಾಡಬೇಕು. ಕೆಲವು ವೇಳೆ ಆರ್ಥಿಕ ಸ್ಥಿತಿಯನ್ನು

ಅವಲಂಬಿಸಿ ಕೆಲಸ ಮಾಡಬೇಕಾಗುತ್ತದೆ. ಅದಕ್ಕೆ 'ಬಡತನ ಬಂದರೆ ಬಾಳೆ ಹಾಕು' ಎಂದು ಮಾರ್ಗದರ್ಶನ ನೀಡಿದ್ದಾರಲ್ಲದೆ 'ಬಾಳೆ ಬಿಗಿದು ಹಾಕು, ಅಡಕೆ ಅಳ ಹಾಕು' ತೆಂಗು ತೇಲಿಸಿ ಹಾಕು, 'ಬಿತ್ತಿ ಬೆಳೆಯುವುದಕ್ಕಿಂತ ಕಿತ್ತು ನೆಡುವುದು ಲೇಸು' -ಹೀಗೆ ವ್ಯವಸಾಯದ ವಿಧಾನವನ್ನು ಕುರಿತು ಹೇಳಿದ್ದಾರೆ.

ಆಷಾಡದ ಗಾಳಿ ಎಂದರೆ ಎಂತವರಿಗೂ ಬೇಸರ. ಗಾಳಿಗೆ ಮರೆಯಾಗಿ, ಬೆಚ್ಚ ನೆಯ ಜಾಗದಲ್ಲಿ ಕುಳಿತು ಗರಿಗುಟ್ಟುವ ಹುರಿಗಾಳನ್ನು ತಿನ್ನಬೇಕೆಂಬ ಬಯಕೆ, ಆದರೆ ಹೊಲದಲ್ಲಿ ಕಾಯಕದಲ್ಲಿ ತೊಡಗಿರುವ ರೈತರು ಇದಾವುದನ್ನು ಬಯಸು ವಂತಿಲ್ಲ. ಅವರಿಗೆ ಆಷಾಡ ಒಂದು ರೀತಿಯಲ್ಲಿ ಪೀಡೆಯಿದ್ದಂತೆ ಒಂದೇ ಸಮನೆ ರೊಯ್ಯನೆ ಕಣ್ಣು, ಕಿವಿ, ಮೂಗಿಗೆ ಧೂಳು ತುಂಬುವಂತೆ ಬೀಸುವ ಗಾಳಿಯಿಂದ ರೋಸಿಹೋದ ಅವರು ಆ ಕ್ಷಣದಲ್ಲಿ ಅವರಿಗುಂಟಾಗುವ ಬಯಕೆ ಏನೆಂಬುದನ್ನು ನೋಡೋಣ.

'ಆಷಾಡದ ಗಾಳಿ ಬೀಸ್ ಬೀಸಿ ಹೋಗುವಾಗ ಹೇಸಿ ನನ್ನ ಜೀವ ಹೆಂಗ ಸಾಗ ಬಾರದೆ' ಇದೆಂಥ ವಿಪರ್ಯಾಸವಾದ ಬಯಕೆ. ಈ ಗಾದೆಯ ಹಿಂದೆ ಅದೆಂಥ ಬೇಸರವಿದೆ. ಹೀಗೆಲ್ಲ ಅನಿಸಿದರೂ ಅವರೆಂದೂ ಕೈಕಟ್ಟಿ ಕುಳಿತವರಲ್ಲ. ವ್ಯವಸಾಯದಲ್ಲಿ ಆರಂಭದಲ್ಲಿ ಕಷ್ಟಪಟ್ಟರೆ ಮುಂದೆ ಸುಖ ಕಟ್ಟಿಟ್ಟ ಬುತ್ತಿ ಎಂಬುದು. ಅನುಭವ ವೇದ್ಯವಾದದು. 'ಕೃಷಿಯಲ್ಲಿ ಆರಂಭದಲ್ಲಿ ಕಷ್ಟ, ಸಂಸಾರದಲ್ಲಿ ನಡುವಿ ನಲ್ಲಿ ಕಷ್ಟ, ವ್ಯಾಪಾರದಲ್ಲಿ ಕೊನೆಯಲ್ಲಿ ಕಷ್ಟ' ಎಂಬ ಗಾದೆ ಇಡೀ ಸಮಾಜಕ್ಕೆ ಅನ್ವಯವಾಗುವಂತಹದು. ಒಂದೊಂದು ಗಾದೆಯೂ ಅನುಭವದ ಮೂಸೆಯಿಂದ ಪುಟದೆದ್ದ ಅಭಿವ್ಯಕ್ತಿ

ಗ್ರಾಮೀಣರಿಗೆ ದುಡಿಮೆಗೆ ತಕ್ಕ ಪ್ರತಿಫಲ ದೊರೆತಾಗ ಅವರಿಗಾಗುವ ಆನಂದ ಅಪಾರ. ಹಿಡಿಯಾಗಿ ಚೆಲ್ಲಿದ ಕಾಳು ಆಳೆತ್ತರದ ರಾಶಿಯಾಗಿ ಕಂಡಾಗ ತೃಪ್ತಿ ನೆಮ್ಮದಿ ಸಂತೋಷ. ಅವರ ದೃಷ್ಟಿಯಲ್ಲಿ ಒಂದೊಂದು ಕಾಳು ಅತ್ಯಮೂಲ್ಯ. "ಹನಿಗೂಡಿದರೆ ಹಳ್ಳ ತೆನೆಗೂಡಿದರೆ ರಾಶಿ" ಎಂಬುದನ್ನು ಮನಗೊಂಡು ಅವರು ಒಂದು ಹಿಡಿ ಕಾಳು ವ್ಯರ್ಥವಾಗಿ ಹೋಗಲು ಬಿಡುವುದಿಲ್ಲ. ಕಷ್ಟಪಟ್ಟು ದುಡಿ ಯುವರಿಗೆ ಭೂಮಿತಾಯಿ ಎಂದಿಗೂ ಅನ್ಯಾಯ ಮಾಡುವುದಿಲ್ಲ ಎಂಬ ಧೃಡನಂಬಿಕೆ ಅವರನ್ನು ನಿತ್ಯ ಕ್ರಿಯಾಶೀಲರನ್ನಾಗಿ ಮಾಡಿದೆ. "ಕೈ ಕೆಸರಾದರೆ ಬಾಯಿ ಮೊಸರು" ಎಂಬ ತತ್ವವನ್ನು ತಮ್ಮ ಜೀವನದ ನಿತ್ಯಮಂತ್ರವನ್ನಾಗಿಸಿ ಕೊಂಡಿ ರುವ ಗ್ರಾಮೀಣರು ನಮ್ಮ ರಾಷ್ಟ್ರದ ಬೆನ್ನೆಲಬು.

# ಸೆರೆಮನೆಯಲ್ಲಿ ಸಾಹಿತ್ಯ ರಚನೆ

—ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

ಅತಿ ಶ್ರೇಷ್ಠವಾದ ಕೆಲವು ಸಾಹಿತ್ಯ ಗ್ರಂಥಗಳು ಸೆರೆಮನೆಯಲ್ಲಿ ರಚಿಸಲ್ಪಟ್ಟವು. ವೀರಚರಿತ ವರ್ಣನೆ, ತತ್ವಜ್ಞಾನ ಪ್ರಬಂಧದಿಂದ ಹಿಡಿದು ಸಣ್ಣ ಕಥೆಗಳಿಂದ ಮತ್ತು ದಿನಚರಿಯವರೆಗೂ ನಾನಾ ಬಗೆಯ ಸಾಹಿತ್ಯ ಗ್ರಂಥಗಳು ಪ್ರತಿಭಾಶಾಲಿಗಳು ಸೆರೆಮನೆಯಲ್ಲಿದ್ದಾಗ ರಚಿತವಾದವು. ಸೆರೆಮನೆಯೊಳಗಿನ ಶಾಂತ ವಾತಾವರಣವೂ, ವಿರಾಮ ಕಾಲವೂ ಏಕಾಗ್ರತೆಗೆ ಅನುಕೂಲವಾದ ಪರಿಸ್ಥಿತಿಯೂ ಅಂಥ ಮಹಾಕೃತಿಗಳ ರಚನೆಗೆ ಬಹುಮಟ್ಟಿಗೆ ನೆರವಾದವು.

ಈ ಗ್ರಂಥಗಳು ಚರಿತ್ರೆಯ ನಾನಾ ಕಾಲಮಾನಗಳಲ್ಲಿ ಮತ್ತು ನಾನಾ ದೇಶಗಳಲ್ಲಿ – ಇಟಲಿ, ಫ್ರಾನ್ಸ್, ಇಂಗ್ಲೆಂಡ್, ಅಮೆರಿಕ ಮತ್ತು ಭಾರತ – ರಚಿಸಲ್ಪಟ್ಟವು. ಸೆರೆಮನೆ ಸಾಹಿತ್ಯವು ಕ್ರಿ. ಪೂ. 264 – 194 ರಲ್ಲಿದ್ದ ಲ್ಯಾಟಿನ್ ಕವಿ ಮತ್ತು ನಾಟಕಕಾರ ಗ್ರೇಯಸ್ ನೇವಿಯಸ್ಪೆಂಬಾತನಿಂದ ಆರಂಭವಾಯಿತೆಂದು ಹೇಳಬಹುದು. ಆತನು ರಾಜಮಾನ್ಯ ಶ್ರೀಮಂತರ ಆಗ್ರಹಕ್ಕೆ ಸಿಕ್ಕಿ ಕಾರಾಗೃಹಕ್ಕೆ ದೂಡಲ್ಪಟ್ಟ. ಅಲ್ಲಿಯೇ ಅವನು ಎರಡು ಅಮೋಘ ನಾಟಕಗಳನ್ನು ರಚಿಸಿದ.

ರೋಮನ್ ರಾಜ್ಯದ ಅತಿ ಶ್ರೇಷ್ಠ ತತ್ವಜ್ಞಾನಿ ಬೋಎಥಿಯಸ್ ಎಂಬುವವನಿಗೆ ಇಟಲಿಯ ರಾಜ ಥಿಯೋಡೋರಿಕ್ಕನು ಮರಣದಂಡನೆಯನ್ನು ವಿಧಿಸಿದಾಗ ಆ ವಿದ್ವಾಂಸನು ತಾನು ಗಲ್ಲಿಗೇರುವ ದಿನವು ಸಮೀಪಿಸುತ್ತಿದ್ದಾಗ ಸೆವಿಲ್ಲೆ ಎಂಬ ಕಾರಾಗೃಹದಲ್ಲಿ "ಕಾನ್ಸೊಲೇಷನ್ಸ್ ಆಫ್ ಫಿಲಾಸಫಿ" ಎಂಬ ಮಹತ್ವದ ಗ್ರಂಥವನ್ನು ರಚಿಸಿದ. ಪಾಶ್ಚಾತ್ಯ ತತ್ವದರ್ಶನದ ಇತಿಹಾಸದಲ್ಲಿ ಅದೊಂದು ಅಮೋಘ ಗ್ರಂಥ. ಪ್ರಖ್ಯಾತ ಚರಿತ್ರಗಾರ ಗಿಬ್ಬನ್ ಅದನ್ನು "ಸುವರ್ಣಕೃತಿ" ಯೆಂದು ಕರೆದ. ಅದು ಮಹಾ ಸಾಹಿತಿ ಡಾಂಟೆಯ ಮೇಲೆ ಭಾರಿ ಪ್ರಭಾವವನ್ನು ಬೀರಿತು. ಈ ಕೃತಿ ಚಾಸರ್‌ನಿಂದ ಇಂಗ್ಲಿಷ್ ಭಾಷೆಗೆ ಅನುವಾದಿಸಲ್ಪಟ್ಟಿತ್ತು.

ಸ್ಪೇನ್ ದೇಶದ ಸರ್ವಾಂಟಿಸ್ ಎಂಬ ಸಾಹಿತಿಯು "ಡಾನ್ ಕ್ವಿಕ್ಸೋಟ್" ಮತ್ತು "ಸಾಂಚೋ ಪಾಂಜಾ" ಎಂಬ ಕಾದಂಬರಿಗಳನ್ನು ತಾನು ಕಾರಾಗೃಹದಲ್ಲಿದ್ದಾಗ ರಚಿಸಿದ. ಮನೋರಂಜಕ ಕೃತಿಯಾದ "ಡಾನ್ ಕ್ವಿಕ್ಸೋಟ್," ಜಗದ್ವಿಖ್ಯಾತ ಗ್ರಂಥವೆಂದು ಪರಿಗಣಿಸಲ್ಪಟ್ಟು ವಿಶ್ವಸಾಹಿತ್ಯದ ಅಂತಸ್ತಿನಲ್ಲಿ ಸ್ಥಾನವನ್ನು ಪಡೆದಿದೆ.

ವಾಲ್ಟೇರ್ ಎಂಬ ಹಿರಿಯರ ಫ್ರೆಂಚ್ ಸಾಹಿತಿಯು ಸಮಾಜದ ಪ್ರಸಿದ್ಧ ಪುರುಷರನ್ನು ತಿರಸ್ಕರಿಸಿದನೆಂಬ ಆಪಾದನೆಯ ಮೇಲೆ ಪ್ಯಾರಿಸ್ ಪಟ್ಟಣದ ಬ್ಯಾಸ್ಟಿಲ್ ಎಂಬ ಕಾರಾಗೃಹದಲ್ಲಿ ಕೆಲವು ಕಾಲ ಬಂಧಿಸಲ್ಪಟ್ಟಿದ್ದ. ಆ ಸ್ಥಿತಿಯಲ್ಲೇ ಅವನು "ಹೆನ್ರಿಯೇಡ್" ಮುಂತಾದ ಕೆಲವು ಪ್ರಸಿದ್ಧ ಗ್ರಂಥಗಳನ್ನು ಬರೆದ, ಇಂಗ್ಲೆಂಡಿನ ರಿಚರ್ಡ್ ಲವ್‌ಲೇಸ್ ಎಂಬ ಸಾಹಿತಿಯು ಕತ್ತಲಗವಿಯ ಕಾರಾಗೃಹದಲ್ಲಿದ್ದಾಗ ಪ್ರಖ್ಯಾತ ಕವನಗಳನ್ನು ರಚಿಸಿದ. "ಕಲ್ಲಿನ ಗೋಡೆಗಳು ಸೆರೆಮನೆಯನ್ನು ಮಾಡುವುದಿಲ್ಲ; ಕಬ್ಬಿಣದ ಸಲಾಕಿಗಳು ಖೈದಿಯ ಪಂಜರವನ್ನು ಮಾಡುವುದಿಲ್ಲ.' (Stone walls do not make a prison, nor iron, rads a cage) ಎಂಬ ಅವನ ಕವಿತೆಯು ಚಿರಸ್ಮರಣೀಯವಾಗಿದೆ.

ದೇಶಪರ್ಯಟನ ಮಾಡಿದ್ದ ಮಾರ್ಕೋಪೋಲೋ ಎಂಬುವನು ಇಟಲಿ ದೇಶದಲ್ಲಿ ಒಂದು ಕಾರಾಗೃಹದಲ್ಲಿದ್ದಾಗ ತನ್ನ ಅದ್ಭುತ ಕಲ್ಪನಾ ಶಕ್ತಿಯಿಂದ ದೇಶಪರ್ಯಟನದ ವೃತ್ತಾಂತಗಳನ್ನೂ, ತಾನು ಕುಬ್ಲಾಯ್‌ಖಾನನ ದೇಶದಲ್ಲೂ, ಆಸ್ಥಾನದಲ್ಲೂ ಕಂಡ ವಿಸ್ಮಯಕಾರಿ ಸಂಗತಿಗಳನ್ನೂ ಮನರಂಜಿಸುವಂತೆ ಉಲ್ಲೇಖಿಸಿದ.

ಇಂಗ್ಲೆಂಡಿನ ಜಾನ್ ಬನ್‌ಯನ್ ಎಂಬ ಧರ್ಮಶೀಲ ಮಹಾಪುರುಷನು ಧಾರ್ಮಿಕ ಸಂಗತಿಗಳಲ್ಲಿ ಉತ್ಸಾಹಿತನಾಗಿ ಬಡವರಿಗೆ ಧರ್ಮೋಪದೇಶ ಮಾಡುತ್ತಿದ್ದಾಗ, ಅದನ್ನು ಸೈರಿಸದ ಮತಾಂಧರು ಅವನನ್ನು 1660ರಲ್ಲಿ ಬೆಡ್‌ಫರ್ಡ್ ಕಾರಾಗೃಹದಲ್ಲಿಟ್ಟರು. ಅವನು ಧರ್ಮೋಪದೇಶ ಮಾಡುವುದನ್ನು ಬಿಟ್ಟರೆ ಅವನನ್ನು ಬಿಡುಗಡೆ ಮಾಡುವೆವೆಂದು ಅವನಿಗೆ ಪದೇಪದೇ ಹೇಳಿದರೂ ಅವನು ಅದಕ್ಕೆ ಒಪ್ಪಲಿಲ್ಲ. "ಇವತ್ತು ನೀವು ನನ್ನನ್ನು ಬಿಡುಗಡೆ ಮಾಡಿದರೆ ನಾನು ಪುನಃ ನಾಳೆ ಧರ್ಮೋಪದೇಶ ಮಾಡುವೆನು'' ಎಂದು ಉತ್ತರಿಸುತ್ತಿದ್ದ. 12 ವರ್ಷಗಳಿಗಿಂತಲೂ ಹೆಚ್ಚು ಕಾಲ ಕಾರಾಗೃಹದಲ್ಲಿ ಚಳಿಯಾದ, ಕತ್ತಲು ಮತ್ತು ತೇವದ ಕೊಠಡಿಯಲ್ಲಿದ್ದ ಪಾದರಕ್ಷೆಗಳ ಲೇಸುಗಳನ್ನು ಮಾಡಿ ತನ್ನ ಕುಟುಂಬವನ್ನು ಪೋಷಿಸಿದ. ಇತರ ಖೈದಿಗಳಿಗೆ ಧರ್ಮೋಪದೇಶ ಮಾಡುತ್ತಿದ್ದ. ಧಾರ್ಮಿಕ ಗ್ರಂಥಗಳನ್ನು ಓದುತ್ತಿದ್ದ, ಪ್ರತಿಭಾ ಶಕ್ತಿಯಿಂದ ಅನೇಕ ನಿರುಪಮ ಗ್ರಂಥಗಳನ್ನು ರಚಿಸಿದ.

1672ರಲ್ಲಿ ಅವನನ್ನು ಕಾರಾಗೃಹದಿಂದ ಬಿಡುಗಡೆ ಮಾಡಲಾಯಿತು. ಅವನು ಕೂಡಲೇ ಧರ್ಮೋಪದೇಶ ಮಾಡತೊಡಗಿದ. ಆಗ ಅವನನ್ನು ಆರು ತಿಂಗಳ ಕಾಲ ಪುನಃ ಸೆರೆಯಲ್ಲಿ ಬಂಧಿಸಿಡಲಾಯಿತು. ಸೆರೆಯಲ್ಲಿಯೇ ಅವನು "ಪಿಲಿಗ್ರಿಮ್ಸ್ ಪ್ರೋಗ್ರೆಸ್" (Pilgrims progress) ಎಂಬ ಅಮೋಘ ಗ್ರಂಥವನ್ನು ರಚಿಸಿದ, ಅದು ಲೋಕಪ್ರಸಿದ್ಧವಾಯಿತು. ಅವನ ಜೀವಮಾನದಲ್ಲೇ 1,00,000 ಪ್ರತಿಗಳ ಮಾರಾಟವಾಯಿತು. ಅದರ ಖ್ಯಾತಿ ಎಷ್ಟೆಂದರೆ ಅದನ್ನು

150 ಭಾಷೆಗಳಲ್ಲಿ ಭಾಷಾಂತರ ಮಾಡಲಾಯಿತು. ಅದು ಎಷ್ಟಿವೋ ಭಾಷೆ ಮತ್ತು ಟಿಬೆಟ್ ಭಾಷೆಗಳಿಗೂ ತರ್ಜುಮೆಯಾಗಿದೆ.

ಇಂಗ್ಲೆಂಡಿನ ಸರ್ ವಾಲ್ಟರ್ ರಾಲೆ (Sir Walter Raleigh) ಎಂಬುವನು ಮೊದಲನೇ ಎಲಿಜಬೆತ್ ರಾಣಿಯ ಆಸ್ಥಾನದಲ್ಲಿ ಪ್ರಮುಖನಾಗಿ ರಾಣಿಗೆ ಬಹು ಪ್ರೀತಿಪಾತ್ರನಾಗಿದ್ದ. ಅವನ ಠೀವಿ ಎಷ್ಟಿತ್ತೆಂದರೆ ಅವನು ತನ್ನ ಪಾದರಕ್ಷೆಗಳ ಮೇಲೆ ವಜ್ರಗಳನ್ನೂ, ಕಿವಿಗಳ ಮೇಲೆ ಮುತ್ತಿನ ಗೊಂಚಲುಗಳನ್ನೂ ಧರಿಸುತ್ತಿದ್ದ. ಕಾಲಾಂತರದಲ್ಲಿ ಅವನು ರಾಜಕೀಯ ವಿದ್ಯಮಾನಗಳ ತೊಡಕಿನಲ್ಲಿ ಸಿಕ್ಕಿಕೊಂಡು, ಪ್ರತಿಸ್ಪರ್ಧಿಗಳ ಮತ್ಸರಕ್ಕೆ ಬಲಿಯಾಗಿ, 14 ವರ್ಷಗಳ ಕಾಲ ಕಾರಾಗೃಹವಾಸವನ್ನನುಭವಿಸಿದ. ಅವನ ಕೋಣೆ ತೇವವಾಗಿಯೂ, ಬಿಸ್ಕಟ್ಟಾಗಿಯೂ ಇತ್ತು. ಗೋಡೆಗಳಿಂದ ಕೆಸರಿನ ನೀರು ಸ್ರವಿಸುತ್ತಿತ್ತು. ಉಗ್ರ ಚಳಿ, ಅವನ ಎಡ ತೋಳು ಸಂಧಿವಾತದಿಂದ ಮರಗಟ್ಟಿತು. ಅವನ ಕೈ ಮುದುಡಿಕೊಂಡು ನೋಯುತ್ತಿತ್ತು. ಆದರೂ ಅವನು ಕೊನೆಯುಸಿರೆಳೆಯುವವರೆಗೂ ಶಾಂತ ಚಿತ್ತದಿಂದಿದ್ದು "ಜಗತ್ತಿನ ಚರಿತ್ರೆ" ಎಂಬ ಸರ್ವೋತ್ತಮ ಗ್ರಂಥವನ್ನು ರಚಿಸಿದ. ಮೂರು ಶತಮಾನಗಳು ಕಳೆದುಹೋಗಿದ್ದರೂ ಈಗಲೂ ಆ ಗ್ರಂಥವನ್ನು ಅನೇಕ ಶಾಲೆ, ಕಾಲೇಜುಗಳಲ್ಲಿ ಪಠ್ಯ ಪುಸ್ತಕವನ್ನಾಗಿ ಬಳಸಲಾಗುತ್ತಿದೆ.

ಆಲಿವರ್ ಗೋಲ್ಡ್‌ಸ್ಮಿತ್ ಕಾರಾಗೃಹದಲ್ಲಿದ್ದಾಗ ಅಮೋಘ ಗ್ರಂಥಗಳನ್ನು ಬರೆದ. ಆಸ್ಕರ್ ವೈಲ್ಡ್ ಎಂಬ ಪ್ರತಿಭಾಶಾಲಿಯು ಕಾರಾಗೃಹದಲ್ಲಿದ್ದಾಗ "ಡಿ ಪ್ರೊಫನ್‌ಡಿಸ್" ಎಂಬ ಕೃತಿಯನ್ನೂ, ಲಾವಣಿಪದ್ಯಗಳನ್ನೂ ರಚಿಸಿದ. ಡೋಸ್ಟೋವ್‌ಸ್ಕೀ ಎಂಬುವನು ಓಮೆಸ್ಕ್ ಕೋಟೆಯಲ್ಲಿ ಬಂಧಿತನಾಗಿದ್ದಾಗ ಅನಾರೋಗ್ಯ, ಅಪಸ್ಮಾರ ರೋಗದ ಬವಳಿ ಮುಂತಾದ ಕಷ್ಟಗಳಿಂದ ನರಳುತ್ತಿದ್ದ, ಆದರೂ ಅವನು ಅನೇಕ ಸಾಹಿತ್ಯ ಗ್ರಂಥಗಳನ್ನು ರಚಿಸಿದ.

ಹಿಟ್ಲರ್ 1923ರಲ್ಲಿ ಲ್ಯಾಂಡ್ಸ್‌ಬರ್ಗ್ ಕೋಟೆಯ ಸೆರೆಮನೆಯಲ್ಲಿದ್ದಾಗ "ಮೈನ್‌ಕೆಂಫ್" ಎಂಬ ಗ್ರಂಥವನ್ನು ತಯಾರುಮಾಡಿದ. ಬ್ರಿಟನ್ನಿನ ಪ್ರಖ್ಯಾತ ಗಣಿತಶಾಸ್ತ್ರಜ್ಞನೂ ತತ್ತ್ವಜ್ಞಾನಿಯೂ ಆಗಿ ಸಾಹಿತ್ಯಕ್ಕಾಗಿ ನೊಬೆಲ್ ಪಾರಿತೋಷಕವನ್ನು ಪಡೆದ ಬರ್ಟ್ರಾಂಡ್ ರಸೆಲ್ ತನ್ನ ಸ್ವಂತ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಕ್ಕಾಗಿ ಬ್ರಿಕ್ಸ್‌ಟನ್ ಪಟ್ಟಣದ ಸೆರೆಮನೆಯಲ್ಲಿಡಲ್ಪಟ್ಟಿದ್ದ. ಆಗ ಆತ "ಮನಸ್ಸಿನ ವಿನ್ಯಾಸ", "ಗಣಿತ ತತ್ತ್ವಶಾಸ್ತ್ರ ಪ್ರವೇಶಿಕೆ" ಮುಂತಾದ ಗ್ರಂಥಗಳನ್ನು ರಚಿಸಿದ.

ಥಾಮಸ್ ಪೇನ್ ಎಂಬ ಅಮೆರಿಕನ್ನನು ಫ್ರಾನ್ಸಿನ ಬಂದಿಖಾನೆಯಲ್ಲಿದ್ದಾಗ ಅಮೆರಿಕನ್ನರು ಸ್ವಾತಂತ್ರ್ಯಕ್ಕಾಗಿ ಹೋರಾಡಬೇಕೆಂದು ನಿರೂಪಿಸಲು ಅನೇಕ ಜನ

ಪ್ರಿಯ ಗ್ರಂಥಗಳನ್ನು ರಚಿಸಿದ. ಲೆಯ್ ಹಂಟ್ (Leih Hunt) ಎಂಬಾತ ಎರಡು ವರ್ಷಕಾಲ ಸೆರೆಯಲ್ಲಿದ್ದಾಗ ಅನೇಕ ಗ್ರಂಥಗಳನ್ನು ಬರೆದ. 17ನೇ ಶತಮಾನದಲ್ಲಿ ನ್ಯಾಯಶಾಸ್ತ್ರ ಪಂಡಿತನೂ, ರಾಜನೀತಿಜ್ಞನೂ ಆಗಿದ್ದ ರಲ್ಯಾಗೋ ಗ್ರೊಟಿಯಸ್ ಎಂಬ ಡಚ್‌ರವನು ಕಾರಾಗೃಹದಲ್ಲಿದ್ದಾಗ ಪ್ರಖ್ಯಾತ ಗ್ರಂಥಗಳನ್ನು ರಚಿಸಿದ. ಲೆನಿನ್ (Lenin) ಸೆರೆಮನೆಯಲ್ಲಿದ್ದಾಗ ಕ್ರಾಂತಿಕಾರಿ ಪುಸ್ತಕಗಳನ್ನು ಬರೆದ. ಅವುಗಳು ಇತರರಿಗೆ ಗೊತ್ತಾಗದಂತೆ ಅವುಗಳನ್ನು ಶಾಯಿಗೆ ಬದಲು ಹಾಲಿನಲ್ಲಿ ಬರೆದ. ಆ ಬರಹಗಳನ್ನು ಬಿಸಿ ನೀರಿನಲ್ಲಿ ಅದ್ದಿದ ನಂತರವೇ ಓದಲು ಸಾಧ್ಯವಾಗಿತ್ತು.

ಅಮೇರಿಕದ ಒಂದು ಬ್ಯಾಂಕಿನಲ್ಲಿ ಖಚಾಂಚಿಯಾಗಿದ್ದ ವಿಲಿಯಂ ಸಿಡ್ನೀ ಪೋರ್ಟರ್ ಎಂಬಾತ ಹಣಕಾಸಿನ ಆಕ್ರಮಣಕ್ಕಾಗಿ 1898 ರಿಂದ 1901ರ ವರೆಗೆ ಮೂರು ವರ್ಷಕಾಲ ಕಾರಾಗಾರದಲ್ಲಿರಬೇಕಾಯಿತು. ಅದಕ್ಕೆ ಹಿಂದೆ ಅವನು ಎಂದೂ ಯಾವ ಸಾಹಿತ್ಯವನ್ನೂ ಬರೆದಿರಲಿಲ್ಲ. ಸೆರೆಮನೆಯಲ್ಲಿ ಅವನು "ಓ ಹೆನ್ರಿ" ಎಂಬ ಕಾವ್ಯನಾಮದಲ್ಲಿ ಬಹು ಸೊಗಸಾದ ಸಣ್ಣ ಕತೆಗಳನ್ನು ರಚಿಸಿ ಈ ಕಲೆಯಲ್ಲಿ ಅದ್ವಿತೀಯನೆನಿಸಿಕೊಂಡು, ವಿಶ್ವವಿಖ್ಯಾತನಾದ. ಈ ಕೃತಿಯಲ್ಲಿ 60 ಲಕ್ಷಕ್ಕಿಂತಲೂ ಹೆಚ್ಚು ಪ್ರತಿಗಳ ಮಾರಾಟವಾಯಿತು. ಅವು ಜಪಾನ್, ಡೆನ್ಮಾರ್ಕ್, ನಾರ್ವೆ, ಎಸ್ಪರಾಂಟೋ, ಫ್ರೆಂಚ್, ಜರ್ಮನ್, ಸ್ವೀಡಿಷ್ ಮೊದಲಾದ ನೂರಾರು ಭಾಷೆಗಳಿಗೆ ಅನುವಾದಿಸಲ್ಪಟ್ಟಿವೆ. ಗುಲಾಮರ ಕಲ್ಯಾಣಕ್ಕೆ ಬಹುಮಟ್ಟಿಗೆ ಕಾರಣವಾದ ಸಮಕಾಲೀನ, ರಾಜಕೀಯ, ಮತ್ತು ಸಾಮಾಜಿಕ ಜೀವನದ ಮೇಲೆ ಅಪಾರ ಪ್ರಚಾರ ಮಾಡಿದ "Uncle Tom's Cabin" ಎಂಬ ಅಮೋಘ ಕೃತಿಯೂ ಒಬ್ಬ ಮಹಾಶಯನಿಂದ ಕಾರಾಗೃಹದಲ್ಲಿ ರಚಿಸಲ್ಪಟ್ಟಿತು. ಅದರ ಪ್ರಕಟಣೆಯ ಮೊದಲನೇ ದಿನ 3000 ಪ್ರತಿಗಳು, ಒಂದು ವಾರದಲ್ಲಿ 10,000 ಪ್ರತಿಗಳು ಮಾರಾಟವಾಗಿದ್ದವು. ಈ ಗ್ರಂಥದ ಬೇಡಿಕೆಯನ್ನು ಪ್ರಕಟಣಾ ಸಂಸ್ಥೆಗಳು ಹಗಲು, ರಾತ್ರಿ ನಿರತವಾಗಿದ್ದವು.

ಭಾರತದಲ್ಲಿಯೂ ಕೆಲವು ಮಹನೀಯರು ಸೆರೆಮನೆಯಲ್ಲಿದ್ದಾಗ ಅಮೋಘ ಗ್ರಂಥಗಳನ್ನು ರಚಿಸಿದರು. ಲೋಕಮಾನ್ಯ ತಿಲಕರು ತಮ್ಮ ಕಾರಾಗೃಹ ಕಾಲವನ್ನು ಗಾಢವಾದ ಪರ್ಯಾಲೋಚನೆ, ಉನ್ನತ ಧ್ಯೇಯಗಳ ವಿಚಾರ, ವಿದ್ವತ್ತಿನ ಸಾಧನೆಗಳಲ್ಲಿ ಉಪಯೋಗಿಸಿದರು. "Arctic home of the Vedas" ಮತ್ತು "ಓರಿಯನ್" ಎಂಬ ಕೃತಿಗಳನ್ನು ಬರೆದರು. ಬರ್ಮಾದ ಮಾಂಡಲೇ ಜೈಲಿನಲ್ಲಿದ್ದಾಗ ಸಾಕಾದಷ್ಟು ಆಧಾರ ಗ್ರಂಥಗಳಿಲ್ಲದಿದ್ದರೂ "ಗೀತಾರಹಸ್ಯ"ವೆಂಬ ಅಗ್ರಗಣ್ಯ ಕೃತಿಯನ್ನು ನಿರ್ಮಿಸಿದರು. ರಾಜಾಜಿಯವರು ಸೆರೆಮನೆಯಲ್ಲಿದ್ದಾಗ "ಜೇಲ್ ಡೈರಿ" ಯನ್ನು ಬರೆದರು. ಸಾನೆ ಗುರೂಜಿಯವರು ಪ್ರಖ್ಯಾತ ಮರಾಠೀ ಕೃತಿಗಳನ್ನು

ಸೆರೆಮನೆಯಲ್ಲಿದ್ದಾಗ ರಚಿಸಿದರು. ಮೌಲಾದ ಅಜಾದ್‌ರವರು ಕೊರಾನಿನ ವ್ಯಾಖ್ಯಾನ
...ನ್ನು ಸೆರೆಮನೆಯಲ್ಲಿದ್ದಾಗ ಬರೆದರು.

ಜವಾಹರಲಾಲ್ ನೆಹ್ರೂರವರು "ಗ್ಲಿಂಪ್ಸ್ ಆಫ್ ವರ್ಲ್ಡ್ ಹಿಸ್ಟರಿ" ಎಂಬ ಮಹತ್ ಗ್ರಂಥವನ್ನು ನೈನಿತಾಲ್, ಬರೈಲಿ, ಡೆಹ್ರಾಡೂನ್ ಸೆರೆಮನೆಗಳಲ್ಲಿದ್ದಾಗ ರಚಿಸಿದರು. ತನ್ನ "ಆತ್ಮ ಕಥೆ"ಯನ್ನು ಜಾನ್ 1934 ರಿಂದ ಫೆಬ್ರುವರಿ 1935ರ ವರೆಗೆ ಸೆರೆಮನೆಯಲ್ಲಿದ್ದಾಗಲೇ ಬರೆದರು. "Discovery of India" ಎಂಬ ಗ್ರಂಥವನ್ನು 1944ರಲ್ಲಿ ಅಹಮದ್‌ನಗರದ ಕೋಟೆ ಬಂದೀಖಾನೆಯಲ್ಲಿದ್ದಾಗ ಬರೆದರು. ವೀರ ಸಾವರ್ಕರ್‌ರವರು ಅಂಡಮಾನ್‌ನಲ್ಲಿ ಬಹು ಕಾಲ ಸೆರೆಯಲ್ಲಿದ್ದಾಗ "ಕಮಲಾ" ಮತ್ತು "ಗೋಮಂತಕ್" ಎಂಬ ವೀರತ್ವದ ಕವನಗಳನ್ನು ರಚಿಸಿದರು. ಬರೆಯಲು ಕಾಗದ, ಸೀಸದಕಡ್ಡಿಗಳಿಲ್ಲದಿದ್ದರಿಂದ ಕವನದ ಸಾಲುಗಳು ಅವರ ಮನಸ್ಸಿಗೆ ಬಂದಾಗ ಅವುಗಳನ್ನು ಉಗುರಿನಿಂದ ಗೋಡೆಗಳ ಮೇಲೆ ಬರೆದು ಬಾಯಿಪಾಠ ಮಾಡುತ್ತಿದ್ದರು. ಈ ಕವನಗಳು ಎಷ್ಟು ಉತ್ಕೃಷ್ಟವಾಗಿವೆಯೆಂದರೆ ಅವು ಕೆಲವು ವಿಶ್ವವಿದ್ಯಾನಿಲಯಗಳಲ್ಲಿ ಹಿರಿಯ ವಿದ್ಯಾರ್ಥಿಗಳಿಗೆ ಪಠ್ಯ ಪುಸ್ತಕವಾಗಿ ನೇಮಿಸಲ್ಪಟ್ಟವೆ.

---

## ಸೋವಿಯತ್ ವಿಜ್ಞಾನಿಗಳಿಂದ "ಆಯುಷ್ಯ ವಿಸ್ತರಣೆ" ಕಾರ್ಯಕ್ರಮ

ಸೋವಿಯೆತ್ ವಿಜ್ಞಾನಿಗಳು ಇದೀಗ 'ಆಯುಷ್ಯ ವಿಸ್ತರಣೆ' ಎಂಬ ದೀರ್ಘ ಕಾಲದ ಸಂಶೋಧನ ಕಾರ್ಯಕ್ರಮವೊಂದನ್ನು ಅನುಷ್ಠಾನಕ್ಕೆ ತರಲು ಮುಂದಾಗಿದ್ದಾರೆ. ದೀರ್ಘಾಯುಷ್ಯಕ್ಕೆ ಕಾರಣವಾಗುವಂತಹ ವಿಧಾನಗಳನ್ನು ರೂಪಿಸುವುದು ಮತ್ತು ಅಂತಹ ವಿಧಾನಗಳನ್ನು ಪರೀಕ್ಷಿಸುವುದು ಈ ಕಾರ್ಯಕ್ರಮದ ಉದ್ದೇಶ. ಸೋವಿಯತ್ ಒಕ್ಕೂಟದ ವಿಜ್ಞಾನ ಹಾಗೂ ವೈದ್ಯಕೀಯ ವಿಜ್ಞಾನ ಅಕಾಡೆಮಿಗಳೆರಡೂ ಒಳಗೊಂಡಂತೆ ಸುಮಾರು ನೂರು ಸಂಶೋಧನ ಸಂಸ್ಥೆಗಳು ಹಾಗೂ ಸಂಘಟನೆಗಳನ್ನು ಈ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವಂತೆ ಆಹ್ವಾನಿಸಲಾಗಿದೆ. ಆರಂಭದ ಹಂತದಲ್ಲಿ ಈ ಕಾರ್ಯಕ್ರಮವು ಮುಪ್ಪಿಗೆ ಕಾರಣವಾಗುವ, ದೈಹಿಕ ಅವಸ್ಥಾಂತರಗಳ ಅಧ್ಯಯನವೂ ಒಳಗೊಂಡಂತೆ ವಾರ್ಧಕ್ಯದ ಮೇಲೆ ಪರಿಸರದ ಪ್ರಭಾವ ಮತ್ತು ಆಯುಷ್ಯ ವರ್ಧನೆಗೆ ಕಾರಣವಾಗಬಹುದಾದ ಇತರ ಅಂಶಗಳನ್ನೂ ಸಂಶೋಧಿಸಲಿದೆ. ಅಂಗರಚನೆಯಲ್ಲಿ ರಕ್ಷಣಾತ್ಮಕ ಪ್ರತಿಕ್ರಿಯೆಗಳು ಹೆಚ್ಚುವಂತೆ ಮಾಡುವ ಹಾಗೂ ಜೀವಕೋಶಗಳಲ್ಲಿನ ಜೈವಿಕ ದ್ರವ್ಯಗಳ ನಾಶವನ್ನು ನಿಧಾನಿಸುವಂತೆ ಮಾಡುವುದೇ ಮೊದಲಾದ ವೈದ್ಯಕೀಯ ವಿಧಾನಗಳನ್ನು ರೂಪಿಸುವುದೂ ಈ ಕಾರ್ಯಕ್ರಮದಲ್ಲಿ ಸೇರಿದೆ.

(ಸೋವಿಯತ್ ಒಕ್ಕೂಟ 10 ಅಕ್ಟೋಬರ್ 81)

# ಕಾಶ್ಮೀರ ಶಿವಾದ್ವೈತ ಸಿದ್ಧಾಂತ

—ದಿ. ಜೆ. ರುದ್ರಪ್ಪ

ಎಲ್ಲಾ ದಾರ್ಶನಿಕರೂ ಬಂಧ ಮತ್ತು ಮೋಕ್ಷ ಈ ಎರಡು ಅಂಶಗಳನ್ನು ಬಹಳ ವಿಸ್ತಾರವಾಗಿ ನಿರೂಪಿಸಿರುತ್ತಾರೆ. ಅಜ್ಞಾನದಿಂದ ಬಂಧ, ಜ್ಞಾನದಿಂದ ಮೋಕ್ಷ ಎಂಬುದು ಸಾಮಾನ್ಯವಾದ ನಿಯಮ. ಈ ಅಜ್ಞಾನವನ್ನು ಅದರ ಸ್ವರೂಪ ಸ್ವಭಾವಗಳನ್ನು ದಾರ್ಶನಿಕರು ಬಗೆಬಗೆಯಾಗಿ ವಿವರಿಸಿರುತ್ತಾರೆ. ಕಾಶ್ಮೀರ ಶಿವಾದ್ವೈತ ಸಂಪ್ರದಾಯದಲ್ಲಿ ಅಜ್ಞಾನ ಅಂದರೆ ಜ್ಞಾನವೇ ಇಲ್ಲದಿರುವಿಕೆಯಲ್ಲ. ಸಂಕುಚಿತವಾದ ತಿಳಿವಳಿಕೆ ಇರುವುದು ಎಂದರ್ಥ. ಈ ಸಂಕುಚಿತವಾದ ತಿಳಿವಳಿಕೆಯೂ ಕೂಡ ಅಸತ್ಯವಾದುದಲ್ಲ. ಸತ್ಯವಾದದ್ದೇ ಆಗಿದೆ. ಜ್ಞಾನ ಸಂಕೋಚಕ್ಕೆ ಇರುವ ಕಾರಣಗಳನ್ನು ಮೂರು ವಿಧವಾಗಿ ವಿಂಗಡಿಸಿರುತ್ತಾರೆ. ಇವುಗಳನ್ನೇ ಆಣವ ಮಾಯೀಯ ಕಾರ್ಮಿಕ ಎಂಬ ಹೆಸರುಗಳಿಂದ ಮಲತ್ರಯಗಳೆಂದು ಕರೆಯುತ್ತಾರೆ. ಈ ಮೂರು ಮಲಗಳಲ್ಲಿ ಆಣವ ಮಲವಿಲ್ಲದೆ ಮಾಯೀಯ ಮಲವಿರುವುದಿಲ್ಲ. ಇವೆರಡೂ ಇಲ್ಲದಿದ್ದರೆ ಕಾರ್ಮಿಕಮಲಕ್ಕೆ ಅವಕಾಶವಿಲ್ಲ. "ತತ್ರ ಪೃಥಿವ್ಯಾದ್ಯಾಭಾಸಾ ಏವ ಮಿಶ್ರೀ ಭೂಯ ಘಟಾದಿ ಸ್ವಲಕ್ಷಣೇ ಭೂತಾಃ, ಕರ್ಮೇಂದ್ರಿಯೇರುಪಸರ್ಪಿತಾ, ಬುದ್ಧೀಂದ್ರಿಯೊರಾಲೋಚಿತಾ, ಅಂತಃಕರಣೇನ ಸಂಕಲ್ಪಿತಾ ಅಭಿಮತಾ ನಿಶ್ಚಿತರೂಪಾ, ವಿದ್ಯಯಾ ವಿವೇಚಿತಾಃ ಕಲಾದಿಭಿರನುರಂಜಿತಾಃ, ಪ್ರಮಾತರಿ ವಿಶ್ರಾಮ್ಯಂತಿ ಇತಿ ತಾತ್ಪರ್ಯಂ." (ಈಶ್ವರ ಪ್ರತ್ಯಭಿಜ್ಞಾ – ಪುಟ ೨೧೪)

ಸರ್ವಜ್ಞತ್ವ, ಸರ್ವಕರ್ತೃತ್ವಾದಿ ಶಕ್ತಿಗಳುಳ್ಳ ಶಿವನು ತನ್ನ ಲೀಲೆಯಿಂದ ತನ್ನಲ್ಲಿಯೇ ವಿಶ್ವವನ್ನು ಹೊರಹೊಮ್ಮಿಸುವಾಗ ಅಭಿನ್ನವಾದ ಸ್ಥಿತಿಯಿಂದ ಗ್ರಾಹ್ಯ ಗ್ರಾಹಕ ಎಂಬ ಭೇದ ವ್ಯಾಪ್ತಿಯನ್ನು ಅಂಗೀಕರಿಸುವಿಕೆಯೇ ಆಣವ ಮಲದ ಆವಿರ್ಭಾವ. ಮಲಗಳು ಜ್ಞಾನಾನುಬಂಧಿಗಳಾಗಿವೆ. ಸಪ್ತ ಪ್ರಮಾತೃಗಳಲ್ಲಿ ಮಂತ್ರಮಹೇಶ್ವರರಿಂದ ವಿಜ್ಞಾನಾಕಲರವರೆಗೂ ಆಣವ ಮಲವ ಗೌಣ ಪ್ರಧಾನ ಭಾವಗಳಿಂದಿರುತ್ತದೆ. ಅಜ್ಞಾನ ಅನುಭವಕ್ಕೆ ಬರಬೇಕಾದರೆ ಜ್ಞಾನಕ್ಕೆ ಸಂಕೋಚವನ್ನುಂಟುಮಾಡುವ ಪ್ರತಿಬಂಧಕಗಳಿರಬೇಕು. ಇಂತಹ ಪ್ರತಿಬಂಧಕಗಳಾಗಿರುವವುಗಳಲ್ಲಿ ಮೊದಲನೆಯವು ಷಟ್ಕಂಚುಕಗಳು. ಇವು ಸರ್ವಜ್ಞತ್ವಾದಿ ಶಕ್ತಿಗಳನ್ನು ಸಂಕುಚಿತವಾದವುಗಳನ್ನಾಗಿ ಮಾಡುತ್ತವೆ. ಇದು ಮಾಯಿಯ

ಮಲದ ಪೂರ್ವಾರ್ಧ. ಅಂತಃಕರಣ ಇಂದ್ರಿಯಗಳು ಸ್ಥೂಲ ಶರೀರ, ಇವುಗಳ ಸಂಬಧವೇರ್ಪಟ್ಟರೆ ಜ್ಞಾನಕ್ಕೆ ಸಂಕೋಚವನ್ನುಂಟು ಮಾಡುವ ಉಪಕರಣಗಳ ಸಂಪುಟವು ಸಂಪೂರ್ಣವಾಯಿತು. ಇಷ್ಟು ಮಾಯಿಾಯ ಮಲದ ವಿಲಾಸ. ಆಣವ ಮತ್ತು ಮಾಯಿಾಯ ಈ ಎರಡು ಮಲಗಳಿಂದಲೂ ದೇಹ ಅಂತಃಕರಣ ಇಂದ್ರಿಯಗಳಿಂದಲೂ ಕೂಡಿದ ಪ್ರಮಾತೃವು ತನ್ನ ಇಂದ್ರಿಯಗಳಿಂದಲೂ ಮನಸ್ಸಿನಿಂದಲೂ ಸುಖ ದುಃಖಾನುಭವಗಳನ್ನುಂಟುಮಾಡುವ ಕರ್ಮಗಳನ್ನಾಚರಿಸುತ್ತಾನೆ. ಇದೇ ಕಾರ್ಮಿಕಮಲ. ಆಣವ ಮಲದಿಂದ ಸ್ವರೂಪ ಸಂಕೋಚವಾಗಿ ಮಾಯಿಾಯ ಮಲದಿಂದ ಜ್ಞಾನಶಕ್ತಿಗಳು ಸಂಕುಚಿತವಾಗಿ ದೇಹ ಮತ್ತು ಇಂದ್ರಿಯಗಳಿಗೆ ಅಧೀನನಾದವನು ಫಲಗಳನ್ನು ಕೊಡುವ ಕಾರ್ಮಿಕ ಮಲಕ್ಕೆ ತುತ್ತಾಗಿ ಮಲತ್ರಯಗಳಿಂದ ಕೂಡಿದವನಾಗಿರುತ್ತಾನೆ.

ಈ ಮಲತ್ರಯಗಳು ಯಾವಾಗ ಮೊದಲಾಗುತ್ತವೆ ಯಾವಾಗ ಕೊನೆಗೊಳ್ಳುತ್ತವೆ ಎಂಬ ವಿಷಯದಲ್ಲಿ ಬಗೆಬಗೆಯಾದ ವಿವರಣೆಗಳಿವೆ. ಅಭಿನವ ಗುಪ್ತಾಚಾರ್ಯರವರು ಬಹಳ ಸುಲಭವಾದ ಒಂದು ದೃಷ್ಟಾಂತದಿಂದ ಈ ಮಲಗಳ ಆವಿರ್ಭಾವ ಮತ್ತು ಸ್ವರೂಪ ಸ್ವಭಾವಗಳನ್ನು ವಿವರಿಸಿರುತ್ತಾರೆ. ಭತ್ತದಕಾಳನ್ನು ಬಿತ್ತಿದರ ಮೊಳಕೆಯಾಗಿ ಪೈರಾಗುತ್ತದೆ. ಈ ಪೈರು ಬೆಳೆದು ತೆನೆ ಬಿಡುವಾಗ ಎಳತೆನೆಯಲ್ಲಿ ಬರೀ ಹಾಲು ಕಂಡುಬರುತ್ತದೆ. ಬಲಿತ ಮೇಲೆ ಮೇಲಿನ ಭಾಗವು ಹೊಟ್ಟಾಗಿಯೂ ಗರ್ಭದಲ್ಲಿರುವುದು ಅಕ್ಕಿಯಾಗಿಯೂ ಅಕ್ಕಿಯ ಅಂಶಕ್ಕೂ ಹೊಟ್ಟಿಗೂ ಮಧ್ಯೆ ಇರುವುದು ಒಂದು ತೌಡಿನ ಮುಸುಕಾಗಿಯೂ ರೂಪವನ್ನು ಹೊಂದುತ್ತದೆ. ಈ ತೌಡಿನ ಮುಸುಕು ಎರಡು ಬಗೆಯಾಗಿರುತ್ತದೆ. ಒಂದು ದಪ್ಪ ತೌಡು ಇನ್ನೊಂದು ತೆಳುವಾದ ಸೂಕ್ಷ್ಮ ತೌಡು. ಇದನ್ನೇ ಸಂಸ್ಕೃತದಲ್ಲಿ ತುಷಾ ( ಹೊಟ್ಟು ) ಕಿಂಶಾರುಕ (ದಪ್ಪತೌಡು) ಕಂಬುಕ (ಸೂಕ್ಷ್ಮತೌಡು) ಎಂದು ಹೇಳುವುದು. ತೆನೆ ಬಿಡುವುದಕ್ಕಿಂತ ಮುಂಚೆ ಈ ಮೂರು ಅಂಶಗಳೂ ಪೈರಿನಲ್ಲಿ ಅಭಿನ್ನವಾಗಿ ಅಡಗಿದ್ದವು. ಬಲಿತಾಗ ಈ ಮೂರು ಭಿನ್ನ ಭಿನ್ನವಾಗಿ ರೂಪುಗೊಂಡವು. ಈ ಮೂರು ಆವರಣಗಳಲ್ಲಿ ಬೀಜಕ್ಕೆ ಇಲ್ಲದಿದ್ದರೆ ಮರಳಿ ಇದು ಮೊಳಕೆಗೆ ಬರಲಾರದು. ಇದೇ ರೀತಿ ಮಲಾವರಣಗಳು ಜನ್ಮಾಂತರಗಳನ್ನುಂಟುಮಾಡುತ್ತವೆ. ಮೊದಲನೆಯದು ಆಣವ ಮಲ ಇದು ಸೂಕ್ಷ್ಮವಾದದ್ದು. ಮಾಯಿಾಯ ಕಂಚುಕಗಳು ಸ್ಥೂಲವಾದ ಆವರಣಗಳು. ಇವುಗಳ ಹೊರಗಿರುವುದು ಶರೀರ. ಇದು ಇನ್ನೂ ಸ್ಥೂಲವಾದದ್ದು. ಈ ಮೂರು ಆವರಣಗಳಿಂದ ಪರಿವೇಷ್ಟಿತನಾಗಿರುವವನು ಬದ್ಧಾತ್ಮ. ಇವನಿಗೆ ಈ ಮೂರು ಮಲಗಳಿಲ್ಲದಿದ್ದರೆ ಜೀವ ಭಾವವಿಲ್ಲ, ಜನನ ಮರಣಗಳಿಲ್ಲ, ಜನ್ಮಾಂತರಗಳಿಲ್ಲ. ಚಿದಾತ್ಮಕನ ಶಕ್ತಿ ಸಂಕೋಚಕ್ಕೆ ಮಲಗಳೆಂದೆನ್ನುತ್ತೇವೆ. ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳ ಸಂಕೋಚಗಳೇ ಈ ಮಲಗಳು. ಶಕ್ತಿಗಳು ಇವನ ಸ್ವರೂಪದಿಂದ ಬೇರೆಯಲ್ಲ. ಸಂಕೋಚವೇ ಮಲ ವಿಕಾಸವೇ ಮುಕ್ತಿ.

ಪರಮಾವರಣಂ ಮಲ ಇಹ ಸೂಕ್ಷ್ಮಂ ಮಾಯಾದಿ ಕಂಚುಕಂ ಸ್ಥೂಲಂ।
ಬಾಹ್ಯಂ ವಿಗ್ರಹರೂಪಂ ಕೋಶತ್ರಯವೇಷ್ಟಿತೋಹಾರ ॥

ಪರಮಾರ್ಥಸಾರ — ೫೫

ತುಷಾ ಕಂಬುಕ ಕಿಂಶಾರುಕ ಮುಕ್ತಂ ಬೀಜಂಯಥಾಂ ಕುರುಂಕುರುತೇ।
ನೈವ ತಥಾಣವ ಮಾಯಾ ಕರ್ಮ ವಿಯುಕ್ತೋ ಭವಾಂ ಕಂಠಂ ಹ್ಯಾತ್ಮಾ।

ತಂತ್ರಸಾರ — ೫೭

ಕಾರ್ಮಿಕ ಮಲವು ಶುಭಾಶುಭ ಫಲಗಳನ್ನುಂಟುಮಾಡುವ ಕರ್ಮಾಚರಣೆಗೂ ಮಾಯೀಯಾ ಮಲವು ಜನ್ಮಾಂತರ ಲೋಕಾಂತರ ಸಂಚಾರಗಳಿಗೂ ಕಾ ೯ ವಾ ಕರ್ಮಸಂಸ್ಕಾರಗಳನ್ನು ಪ್ರಮಾತೃವಿಗೆ ಉಂಟುಮಾಡುತ್ತಿರುತ್ತದೆ. ಕರ್ಮಗಳಿಗೆ ಒಂದು ವಿಶೇಷ ಶಕ್ತಿಯುಂಟು. ಒಂದು ಕ್ರಿಯೆಯಿಂದ ಇನ್ನೊಂದು ಕ್ರಿಯೆ ಹುಟ್ಟುತ್ತದೆ. ಹಾಗೆಯೇ ಒಂದು ಕರ್ಮದಿಂದ ಇನ್ನೊಂದು ಕರ್ಮವು ಅಳಿಯುತ್ತದೆ. ಒಂದು ಕರ್ಮದಿಂದ ಇನ್ನೊಂದು ಕರ್ಮವು ಮುಚ್ಚಲ್ಪಡುತ್ತದೆ. ಅದೇ ರೀತಿ ಒಂದು ಕರ್ಮದಿಂದ ಇನ್ನೊಂದು ಕರ್ಮಕ್ಕೆ ಆವಿರ್ಭಾವವುಂಟಾಗುತ್ತದೆ. ಈ ರೀತಿಯಾಗಿ ಕರ್ಮ ಪ್ರವಾಹವು ವಿಕಲ್ಪ ಸಂತತಿಗಳನ್ನಾಶ್ರಯಿಸಿರುತ್ತದೆ. ಇಂದಿನ ಕರ್ಮಗಳೇ ಮುಂದಿನ ಸಂಸ್ಕಾರಗಳಾಗುತ್ತವೆ. ಸಂಸ್ಕಾರಾನುಸಾರವಾಗಿ ಕರ್ಮಗಳು ಕರ್ಮಗಳಿಂದ ಪುನಃ ಸಂಸ್ಕಾರಗಳು ಈ ರೀತಿ ಕರ್ಮಚಕ್ರವು ತಿರುಗುತ್ತಿರುತ್ತದೆ. ಸತ್ವ, ರಜಸ್ಸು, ತಮಸ್ಸು ಎಂಬ ಪ್ರಕೃತಿಯ ಮೂರು ಗುಣಗಳು ಕರ್ಮಗಳ ಮಿತಿಯನ್ನು ಸೂಚಿಸುತ್ತವೆ. ಈ ಮೂರು ಗುಣಗಳು ಒಂದನ್ನೊಂದು ಬಿಡದೆ ಇದ್ದರೂ ಯಾವ ಗುಣವು ಉದ್ರಿಕ್ತವಾಗಿರುತ್ತದೆಯೋ ಆ ಕಾಲದಲ್ಲಿ ನಡೆಯುವ ಕರ್ಮ ಆ ಗುಣವನ್ನು ಮುಖ್ಯವಾಗಿ ಪಡೆದಿರುತ್ತದೆ. ಜ್ಞಾನವಿಕಾಸವನ್ನುಂಟು ಮಾಡುವವುಗಳು ಸಾತ್ವಿಕ ಕರ್ಮಗಳು. ಕಾಮ ಕ್ರೋಧ ಮೊದಲಾದ ಅಶಾಂತಿಗೆ ಕಾರಣವಾಗಿರುವವುಗಳು ರಾಜಸ ಕರ್ಮಗಳು. ಇವುಗಳಿಂದಲೇ ಮದ ಮಾತ್ಸರ್ಯ ಮೊದಲಾದವುಗಳುಂಟಾಗುತ್ತಿರುತ್ತವೆ. ಪ್ರಮಾದ ಮೋಹ ಮೊದಲಾದವುಗಳು ತಾಮಸ ಕ್ರಿಯೆಗಳು. ಜ್ಞಾನವಿಕಾಸಕ್ಕೆ ಕಾರಣಗಳಾಗಿರುವ ಸತ್ಕರ್ಮಾಚರಣೆಯಿಂದ ರಜಃ ಪ್ರವೃತ್ತಿಗಳು ಮತ್ತು ತಮಃ ಪ್ರವೃತ್ತಿಗಳು ಶಿಥಿಲವಾಗಲಾಗಿ ಕರ್ಮ ಪ್ರವಾಹಕ್ಕೆ ಆಶ್ರಯವಾಗಿರುವ ವಿಕಲ್ಪ ಸಂತತಿಯು ಕ್ಷೀಣವಾಗುತ್ತದೆ. ವಿಕಲ್ಪಗಳು ಕಡಿಮೆಯಾದಾಗ ಅದರ ಸಂಸ್ಕಾರದಿಂದ ಕೆಟ್ಟ ವಿಕಲ್ಪಗಳಿಲ್ಲದೆ ಒಳ್ಳೆ ವಿಕಲ್ಪಗಳು ಉಂಟಾಗುತ್ತಿದ್ದು ಜ್ಞಾನವಿಕಾಸವು ಕ್ರಮ ಕ್ರಮವಾಗಿ ಹೆಚ್ಚಾಗುತ್ತದೆ. ಪರಿಪಾಕಕ್ಕನುಗುಣವಾಗಿ ಕಾರ್ಮಿಕಮಲ ಕ್ಷೀಣವಾಗುತ್ತಾ ಬಂದರೆ ಮಾಯೀಯ ಮಲಕ್ಕೆ ಪ್ರಯೋಜನವಿರುವುದಿಲ್ಲ. ಮಾಯೀಯ ಮಲವು ೩೧ ತತ್ವಗಳು ಸಂಪುಟಾಂತರ್ಗತವಾಗಿರುವ ಕಂಚುಕಗಳು ಪುರ್ಯಷ್ಟಕ, ದೇಹೇಂದ್ರಿಯಗಳಿಂದ ಕೂಡಿರುವಾಗ

ಮಾತ್ರ ಅನುಭವಕ್ಕೆ ಬರುತ್ತಿರುವುದು. ಈ ಮಲವು ಕಳಚಿ ಹೋದರೆ ಗ್ರಾಹ್ಯ ಗ್ರಾಹಕಭಾವ ಮಾತ್ರ ಉಳಿದಿರುವ ಶುದ್ಧ ಜ್ಞಾನವು ವಿಜ್ಞಾನಾಕಲರಿಗಿರುತ್ತದೆ. ಸಕಲನಿಗೆ ಮೂರು ಮಲಗಳೂ ಪ್ರಳಯಾ ಕಲನಿಗೆ ಮಾಯಿಾಯ ಮತ್ತು ಆಣವ ಈ ಎರಡು ಮಲಗಳೂ ವಿಜ್ಞಾನಾಕಲದಿಂದ ಮಂತ್ರಮಹೇಶ್ವರರಿಗಿರುವ ನಾಲ್ಕು ಪ್ರಮಾತೃಗಳಿಗೆ ಆಣವ ಮಲ ಮಾತ್ರ ಇರುತ್ತವೆ.

ಈ ಸಪ್ತ ಪ್ರಮಾತೃಗಳ ವಿಷಯಃವಾಗಿ ಆಚಾರ್ಯ ಅಭಿನವ ಗುಪ್ತರು ಮನನ ಮಾಡುವುದಕ್ಕೆ ಒಂದು ಯುಕ್ತಿಯನ್ನು ಸೂಚಿಸಿದ್ದಾರೆ. ಚಿತ್, ಆನಂದ, ಇಚ್ಛಾ ಜ್ಞಾನ, ಕ್ರಿಯಾ ಎಂಬ ಐದು ಶಕ್ತಿಗಳು ಚಿತ್ತಿನ ಸ್ವರೂಪಾನುಬಂಧಿಗಳು. ಸಪ್ತ ಪ್ರಮಾತೃಭಾವದಲ್ಲಿ ಸಕಲ ಪ್ರಮಾತೃವಿಗೆ ಮೂರು ಮಲಗಳೂ ಪ್ರಳಯಾಕಲನಿಗೆ ಎರಡು ಮಲಗಳೂ ವಿಜ್ಞಾನಾಕಲನಿಂದ ಮಂತ್ರ ಮಹೇಶ್ವರರವರೆಗಿರುವ ನಾಲ್ಕು ಪ್ರಮಾತೃಗಳಿಗೆ ಒಂದು ಮಲವೂ ಇದೆಯೆಂದೂ ಈ ಸಂಪ್ರದಾಯದ ವಿಭಾಗ ಕ್ರಮ. ಎಲ್ಲರ ಅನುಭವದಲ್ಲಿಯೂ ಇರುವ ಜಾಗ್ರದಾದ್ಯವಸ್ಥೆಗಳೂ ಈ ಅನುಭವದಲ್ಲಿ ಮನನ ಮಾಡುವುದಕ್ಕೆ ಸಹಕಾರಿಯಾಗಿರುತ್ತವೆ. ಜಾಗ್ರದವಸ್ಥೆಯೇ 'ಸಕಲ' ಪ್ರಮಾತೃವಿನ ಸಂಪೂರ್ಣಾನುಭವವಿಲ್ಲದ್ದು. ಸಪ್ನಾವಸ್ಥೆಯು 'ಪ್ರಳಯಾಕಲ' ಪ್ರಮಾತೃಭಾವವನ್ನು ಅನುಭವಿಸುವುದಾಗಿದೆ. ಸುಷುಪ್ತ್ಯವಸ್ಥೆಯು 'ವಿಜ್ಞಾನಾಕಲ' ಸ್ಥಿತಿಯನ್ನು ಅನುಭವಿಸುವುದಕ್ಕೆ ಆಶ್ರಯವಾಗಿದೆ. ಸಾಧಕನು ಮೂರು ಮಲಗಳ ಅನುಭವಕ್ಕೆ ಬರುವ ಜಾಗ್ರದವಸ್ಥೆಗೂ ಎರಡು ಮಲಗಳ ಅನುಭವವುಳ್ಳ ಸ್ವಪ್ನಾವಸ್ಥೆಗೂ ಒಂದು ಮಲದ ಅನುಭವವಿರುವ ಸುಷುಪ್ತ್ಯವಸ್ಥೆಗೂ ಇರುವ ವ್ಯತ್ಯಾಸವನ್ನು ಮನನಮಾಡಬೇಕು. ಹೀಗೆ ಮನನಮಾಡುವಾಗ ಸ್ವಭಾವತಃ ಮೂಲ ರೂಪದಲ್ಲಿ ಪಂಚಶಕ್ತಿಗಳಿಂದ ಕೂಡಿರುವ ಪ್ರಮಾತೃವು ಜಾಗ್ರದವಸ್ಥೆಯಲ್ಲಿ ನಾಲ್ಕು ಶಕ್ತಿಗಳಿಂದಲೂ ಸುಷುಪ್ತ್ಯವಸ್ಥೆಯಲ್ಲಿ ಮೂರು ಶಕ್ತಿಗಳಿಂದಲೂ ಕೂಡಿರುವುದನ್ನು ಗಮನಿಸಬೇಕು. ಕ್ರಿಯಾ ಶಕ್ತಿ ಪ್ರಧಾನವಾಗಿರುವುದು ಜಾಗ್ರತ್. ಜ್ಞಾನಶಕ್ತಿ ಮಾತ್ರ ಪ್ರಧಾನವಾಗಿರುವುದು ಸ್ವಪ್ನ. ಇಚ್ಛಾಶಕ್ತಿ ಪ್ರಧಾನವಾಗಿರುವುದು ಸುಷುಪ್ತಿ. ವಿಜ್ಞಾನಾಕಲಾ, ಮಂತ್ರ, ಮಂತ್ರೇಶ್ವರ, ಮಂತ್ರಮಹೇಶ್ವರ ಈ ನಾಲ್ಕು ಪ್ರಮಾತೃ ಭಾವಾನುಭವವೂ ತುರ್ಯವಸ್ಥಾನುಭವವೂ ಒಂದೇ. ಆಣವ ಮಲವಿಲ್ಲದಿರುವ ಅಭೇದ ವ್ಯಾಪ್ತಿಸಾರವಾಗಿರುವ ಶಿವತತ್ವರೂಪವಾಗಿರುವ ಸಪ್ತಪ್ರಮಾತ್ರಾನುಭವವು ತುರ್ಯಾತೀತಾವಸ್ಥೆಗೆ ಸಮಾನವಾದವುಗಳು. ಜ್ಞಾನವಿಕಾಸಕ್ಕೆ ಬಾಹ್ಯ ಪ್ರಪಂಚದಲ್ಲಿ ಆಚರಿಸುವ ಸತ್ಕರ್ಮಗಳೂ ಅಂತರಂಗಿಕವಾಗಿ ಅಭ್ಯಾಸಮಾಡುವವುಗಳೂ ಉಪಾಯಗಳು.

**ತುರ್ಯಾತೀತ** :– ೫ ನೇ ಅವಸ್ಥೆ. ಸಪ್ತಮ ಪ್ರಮಾತೃ – ಶಿವ ಶಕ್ತಿಗಳಲ್ಲಿ ಚಿತ್ ಪ್ರಧಾನ. ಮಲಗಳಿಲ್ಲ.

**ತುರ್ಯ :-** ೪ ನೇ ಅವಸ್ಥೆ. ಮಂತ್ರ, ಮಹೇಶ್ವರ, ಈ ಪ್ರ... ಪ್ರಮಾತೃಗಳು. ಚಿತ್, ಆನಂದ ಇವೆರಡು ಶಕ್ತಿಗಳು ಇರುತ್ತವೆ. ಆಣವ ಮಲ ಒಂದೇ ಇಲ್ಲಿರುವುದು ಆನಂದಾನುಭವ.

**ಸುಷುಪ್ತಿ :-** ೩ ನೇ ಅವಸ್ಥೆ ವಿಜ್ಞಾನ ಕಲಾ ಪ್ರಮಾತೃ. ಚಿತ್, ಆನಂದ ಇಚ್ಛಾ ಈ ಮೂರು ಶಕ್ತಿಗಳು ಆಣವ ಮಲ ಒಂದೇ ಇಲ್ಲಿರುವುದು. ಇಚ್ಛೆಗೆ ಹೆಚ್ಚು ಅವಕಾಶ.

**ಸ್ವಪ್ನ :-** ೨ ನೇ ಅವಸ್ಥೆ. ಪ್ರಳಯಾಕಲಾ ಪ್ರಮಾತೃ. ಚಿತ್, ಆನಂದ ಇಚ್ಛಾ, ಜ್ಞಾನ ಈ ನಾಲ್ಕು ಶಕ್ತಿಗಳು. ಆಣವ ಮತ್ತು ಮಾಯೀಯ ಮಲಗಳು. ಜ್ಞಾನಕ್ಕೆ ಹೆಚ್ಚು ಅವಕಾಶ.

**ಜಾಗ್ರತ್ :-** ಮೊದಲನೆ ಅವಸ್ಥೆ. ಸಕಲಾ ಪ್ರಮಾತೃ. ಚಿತ್, ಆನಂದ, ಇಚ್ಛಾ, ಜ್ಞಾನ, ಕ್ರಿಯಾ ಈ ಐದು ಶಕ್ತಿಗಳು. ಆಣವ, ಮಾಯೀಯ, ಕಾರ್ಮಿಕ ಮಲಗಳು. ಕ್ರಿಯೆಗೆ ಹೆಚ್ಚು ಅವಕಾಶ.

(ಮುಂದುವರಿಯುವುದು)

---




ಶಕ್ನೋತೀ ಹೈವ ಯಃಸೋಢುಂ
ಪ್ರಾಕ್ ಶರೀರ ವಿಮೋಕ್ಷಣಾತ್ ।
ಕಾಮ ಕ್ರೋಧೋದ್ಭವಂ ವೇಗಂ
ಸಯುಕ್ತಃ ಸ ಸುಖೀ ನರಃ ॥

ಯಾವನು ಸಾಯುವ ಮುಂಚೆಯೇ ಬಯಕೆ ಸಿಟ್ಟು ಮೊದಲಾದವುಗಳ ಸೆಳೆತವನ್ನು ಈ ಲೋಕದಲ್ಲಿಯೇ ತಡೆಯಬಲ್ಲವನಾಗುತ್ತಾನೋ ಅವನು ಯೋಗಿ ಮತ್ತು ಸುಖಿ.



# ಕಾವ್ಯವಾಹಿನಿ

## ವಚನ ಪಿತಾಮಹಗೆ ವಂದನೆ

( ಲಿಂ|| ಡಾ|| ಫ. ಗು. ಹಳಕಟ್ಟಿಯವರ ನೆನೆದು )

—ಪ್ರೊ|| ಸಿದ್ದಣ್ಣ ಕನವುಡಿ

ಸುರಿಸುವೆವು ಕಣ್ಣೀರ ಮರೆಯಾದನೆನ್ನುತ್ತ
ಮರೆವುದೆಂತೈ ನಾಡು ಅವನ ಮಹಿಮೆ ?
ಕನ್ನಡದ ಕುಲಕೋಟಿ ನಿತ್ಯವೂ ಸ್ಮರಿಸುವುದು
ಆ ದಿವ್ಯನೆಮಗೊಂದು ಸ್ಫೂರ್ತಿ ಚಿಲುಮೆ ||೧||

ವಚನಗಳ ಉಳುವಿಗೆ ಸಣ್ಣಾಗಿ ಸುಣ್ಣಾಗಿ
ದೇಹ-ಗಂಧದ ಕೊರಡು ತೆಯ್ದು ಹಗಲಿರುಳು
"ಕಾಯಕವೇ ಕೈಲಾಸ" — ಅವನ ಬಾಳಿನ ಉಸಿರು
ನೋವು - ನಷ್ಟವನುಂಗಿ ಆದ ವಜ್ರದ ಹರಳು ||೨||

ವೃತ್ತಿಯಿಂ ವಕೀಲ ಪ್ರವೃತ್ತಿಯಿಂ ಸಾಹಿತಿ
ಸೌಜನ್ಯ ಸರಳತೆಯ ಸಾಕಾರ ಮೂರ್ತಿ
ವಚನ ಸಾಹಿತ್ಯಕ್ಕೆ ಜೀವಕಳೆಯನ್ನಿತ್ತು
ಪಡೆದನೈ ಅಳಿಸದ ಅಮರ ಕೀರ್ತಿ ||೩||

ಮನೆ ಮಠ ಗುಡಿ-ಗುಂಡಾರ ಸುತ್ತಿ
ಕೂಡಿ ಹಾಕಿದ ವಚನ ರಾಶಿ ರಾಶಿ
ಯಾರ ನೆರವೂ ಇರದೆ ಘನಕಾರ್ಯವೆಸಗಿದನು
'ವಚನ ಪಿತಾಮಹ' ನೆಂಬ ಹೆಸರುಗಳಿಸಿ ||೪||

ಕವನ ಕಟ್ಟಿದರೇನು ? ಹಾಡು ಹಾಡಿದರೇನು ?
ತೀರಿಸಲು ಸಾಧ್ಯನೇ ಅವನ ಋಣ ಭಾರ !
ಅವನ ಗುಣವನ್ನು ಬಾಳಿನಲಿ ಅನುಕರಿಸಿ
ನಡೆವುದೇ ಅವಗೆಮ್ಮ ಹೃದಯ ಹಾರ ||೫||

# ಮಳೆಯಾಧಾರಿತ ಪ್ರದೇಶಗಳಲ್ಲಿ ಎಣ್ಣೆಬೀಜಗಳನ್ನು ಬೆಳೆಯಿರಿ

—ಐ. ಸಿ. ಎ. ಆರ್.

ಭಾರತದ ಬಹುಪಾಲು ಕೃಷಿ ಮಳೆಯ ಜೂಜಾಟವನ್ನು ಅವಲಂಬಿಸಿದೆ. ಮುಗಿಲನ್ನೇ ನೋಡುತ್ತಾ ಕುಳಿತು ಕೊಳ್ಳುವ ರೈತರು ತಮ್ಮ ಜಮೀನಿನಲ್ಲಿ ಕೆಲವು ದಿನ ಮಳೆ ಕೈ ಕೊಟ್ಟರೂ ಯಾವ ಬೆಳೆಗಳನ್ನು ಬೆಳೆಯಬಹುದೆಂಬುದರತ್ತ ಗಮನ ವಹಿಸಬೇಕು. ಈ ನಿಟ್ಟಿನಲ್ಲಿ ಬೇಳೆಕಾಳುಗಳು ಮತ್ತು ಎಣ್ಣೆಬೀಜಗಳು ಇಂಥ ಪರಿಸ್ಥಿತಿಗಳಲ್ಲಿ ರೈತನಿಗೆ ವರದಾನವಾಗಬಲ್ಲವು. ಕಾರಣ ಇವುಗಳ ಆಳವಾದ ಬೇರಿನ ವ್ಯವಸ್ಥೆ ಜಮೀನಿನಲ್ಲಿ ಉಳಿದಿರುವ ತೇವಾಂಶವನ್ನು ಹೀರಿಕೊಂಡು ಇವು ಅನಾವೃಷ್ಟಿಯ ಪರಿಸ್ಥಿತಿಗಳನ್ನು ಎದುರಿಸಬಲ್ಲವು. ಇತ್ತೀಚೆಗಂತೂ ಅಲ್ಪ ಕಾಲಾವಧಿಯ ಸುಧಾರಿತ ತಳಿಗಳೂ ಲಭ್ಯ. ಇಳುವರಿಯೂ ಹೆಚ್ಚು! ಬೇಳೆ ಮತ್ತು ಎಣ್ಣೆಯ ಧಾರಣೆಯನ್ನು ನೋಡಿದರೆ ಇವುಗಳಿಂದ ರೈತನಿಗೆ ಲಾಭವೇ ಹೆಚ್ಚು. ಇಂಥ ಕೆಲವು ಎಣ್ಣೆ ಬೀಜಗಳನ್ನು ಬೆಳೆಗಳನ್ನು ಬೆಳೆಯುವ ಕೃಷಿ ವಿಧಾನಗಳು, ವಿವಿಧ ತಳಿಗಳು ಮುಂತಾದ ವಿಷಯಗಳ ಬಗ್ಗೆ ಮಾಹಿತಿಯನ್ನು ಈ ಲೇಖನ ಮೂಲೆಯಲ್ಲಿ ನೀಡಿದೆ.

1. **ಎಳ್ಳು :** ಈ ಬೆಳೆಯಿಂದ ಇಳುವರಿ ಕಡಿಮೆಯಾದರೂ ಮಳೆಯಾಧಾರಿತ ಪ್ರದೇಶಗಳಲ್ಲಿ ಬೆಳೆಯುವ ಬೆಳೆಗಳಲ್ಲಿ ಇದು ಪ್ರಮುಖ ಬೆಳೆ. ಈ ಬೆಳೆಗೆ ಹಾಕಬೇಕಾದ ಲಾಗೋಡೂ ಕಡಿಮೆ, ಉತ್ಪನ್ನಕ್ಕೆ ಬರುವ ಲಾಭವೂ ಹೆಚ್ಚು. '$ಟಿ_4$', '$ಟಿ_{12}$', ಮತ್ತು '$ಟಿ_{13}$', ತಳಿಗಳು ಎಳ್ಳಿನಲ್ಲಿ ಒಳ್ಳೆಯ ತಳಿಗಳು. ಇವನ್ನು ಜೋಳ, ಹೆಸರು, ಉದ್ದು ಮತ್ತು ತೊಗರಿ ಬೆಳೆಗಳ ಜೊತೆ ಅಂತರ ಬೆಳೆಯಾಗಿಯೂ ಬೆಳೆಯಬಹುದು. ಅಂತರ ಬೆಳೆಯಾದರೆ ಮುಖ್ಯ ಬೆಳೆಯ ಜೊತೆಯೇ ಬಿತ್ತಬೇಕು. ಜುಲೈ ಮೊದಲ ಎರಡು ವಾರಗಳಲ್ಲಿ ಬಿತ್ತುವುದು ಸೂಕ್ತ. ಹೆಕ್ಟೇರಿಗೆ 30 ಕಿಲೋ ಸಾರಜನಕ 20 ಕಿಲೋ $ಪಿ_2$ $ಒ_5$ ಗೊಬ್ಬರವನ್ನು ಜಮೀನನ್ನು ಚೆನ್ನಾಗಿ ಹಸನುಮಾಡಿ 10 ಸೆಂಟಿಮೀಟರ್ ಆಳಕ್ಕೆ ಚೆನ್ನಾಗಿ ಬೆರೆಸಬೇಕು. ಬೀಜವನ್ನು 30 ಸೆಂ.ಮೀ. ಅಂತರದ ಸಾಲುಗಳಲ್ಲಿ ಬಿತ್ತಬೇಕು. ಹೆಕ್ಟೇರಿಗೆ 6 ಕಿಲೋ ಬೀಜ ಸಾಕು. ಬಿತ್ತಿದ 25–30 ದಿನಗಳ ಬಳಿಕ ಒಮ್ಮೆ ಕೈಕಳೆ ಕೀಳಿಸಿ 45–50 ದಿನಗಳ ಬಳಿಕ ಮತ್ತೊಮ್ಮೆ ಕಳೆ ತೆಗೆಸಿದರೆ ಸಾಕು. ಈ ಮೇಲಿನ ಕೃಷಿಪದ್ಧತಿಗಳನ್ನನುಸರಿಸಿ ಬೆಳೆದಾಗ ಹೆಕ್ಟೇರಿಗೆ 8 ರಿಂದ 10 ಕ್ವಿಂಟಾಲ್ ಬೀಜದ ಇಳುವರಿ

ಯನ್ನು ಪಡೆಯಬಹುದು. (ಪೂರ್ಣ ಬೆಳೆ) ; ಅಂತರಬೆಳೆಯಾದರೆ 4 ರಿಂದ 5 ಕ್ವಿಂಟಾಲ್ ಇಳುವರಿ ಸಾಧ್ಯ.

2. **ಹರಳು :** ಇದರ ಬೇರಿನ ವ್ಯವಸ್ಥೆ ಆಳವಾಗಿರುವುದರಿಂದ ಈ ಬೆಳೆ ಅನಾವೃಷ್ಟಿಯ ಪರಿಸ್ಥಿತಿಗಳನ್ನು ಚೆನ್ನಾಗಿ ಎದುರಿಸಬಲ್ಲುದು. 'ಅರುಣ' (ಎಸ್. ಪಿ. ಎಚ್-1) ಮತ್ತು 'ರೋಸಿ' ತಳಿಗಳು ಕರ್ನಾಟಕಕ್ಕೆ ಸೂಕ್ತವಾದ ತಳಿಗಳು. ಇವಲ್ಲದೆ ಆರ್.ಸಿ-8 ತಳಿಯನ್ನು ಬೆಂಗಳೂರು ಕೃಷಿವಿಶ್ವವಿದ್ಯಾಲಯವು ಬಿಡುಗಡೆ ಮಾಡಿದೆ. ಈ ತಳಿಗಳನ್ನುಳಿದು 'ತೊರಿಯ-4', '$ಟಿ_3$', '$ಕಲ್ಪಿ_6$' ಮತ್ತು '$ಜೆ_{44}$' ಎಂಬ ಸುಧಾರಿತ ತಳಿಗಳೂ ಉಂಟು. ಇವೆಲ್ಲ ತಳಿಗಳೂ ದೇಶೀ ತಳಿಗಳಿಗಿಂತ ಹೆಚ್ಚು ಇಳುವರಿ ನೀಡುವಂಥವೇ. ಈ ತಳಿಗಳನ್ನು ಮುಂಗಾರಿನಲ್ಲಿ ಜೂನ್ ಅಥವಾ ಜುಲೈ ಮೊದಲ ಭಾಗದಲ್ಲಿ ಬಿತ್ತಬೇಕು. ವಾರ್ಷಿಕ ಬೆಳೆಯಾದರೆ $90 \times 60$ ಸೆಂ.ಮೀ. ಅಂತರದಲ್ಲೂ ಇನ್ನೂ ದೀರ್ಘಾವಧಿ ಬೆಳೆಯಾದರೆ ಬೀಜದಿಂದ ಬೀಜಕ್ಕೆ 90 ರಿಂದ 120 ಹಾಗೂ ಸಾಲಿನಿಂದ ಸಾಲಿಗೆ 180ಸೆಂ.ಮೀ. ಅಂತರವನ್ನು ಕಾಪಾಡಿಕೊಂಡು ಬಿತ್ತಬೇಕು. ಬೀಜದ ಗಾತ್ರವನ್ನವಲಂಬಿಸಿ ಹೆಕ್ಟೇರಿಗೆ 15 ರಿಂದ 20 ಕಿಲೋ ಬಿತ್ತನೆ ಬೇಕಾಗುತ್ತದೆ. ಮಳೆಯಾಧಾರಿತ ಬೆಳೆಯಾದರೆ ಹೆಕ್ಟೇರಿಗೆ 37.5 ಕಿಲೋ ಸಾರಜನಕ, 37.5 ಕಿಲೋ $ಪಿ_2ಒ_5$ ಮತ್ತು 25 ಕಿಲೋ $ಕೆ_2ಒ$ ಗೊಬ್ಬರಗಳನ್ನು ನೀರಾವರಿ ಬೆಳೆಯಾದರೆ 62.5 ಕಿಲೋ ಸಾರಜನಕ, 62.5 ಕಿಲೋ $ಪಿ_2ಒ_5$ ಮತ್ತು 25 ಕಿಲೋ $ಕೆ_2ಒ$ ಗೊಬ್ಬರಗಳನ್ನೂ ನೀಡಬೇಕು. 'ಅರುಣ' ಮತ್ತು 'ಆರ್.ಸಿ-8 ತಳಿಗಳಾದರೆ ಬಿತ್ತು 2-3 ವಾರಗಳ ಮುನ್ನ ಚೆನ್ನಾಗಿ ಕೊಳೆತ ಕೊಟ್ಟಿಗೆ ಗೊಬ್ಬರವನ್ನು ಮಣ್ಣಿಗೆ ಬೆರೆಸಬೇಕು ; ಅನಾವಶ್ಯಕ ಕವಲುಗಳನ್ನು ಚಿವುಟಿ ಹಾಕಬೇಕು. ಬೆಳೆಯ ಮೊದಲ ಹಂತದಲ್ಲಿ ಅಂದರೆ ಬಿತ್ತಿದ 30 ದಿನಗಳಿಗೆ ಒಂದು ಸಾರಿ ಕಳೆ ತೆಗೆದರೆ ಸಾಕು. ಗಿಡ ಹಬ್ಬಿದಂತೆ ಕಳೆ ಹಬ್ಬುವುದು ತಾನಾಗೇ ಕಡಿಮೆಯಾಗುತ್ತದೆ. ಆದರೆ ಕೊಂಡಲಿಹುಳು ಮತ್ತು ಕಾಯಿ ಕೊರೆಯುವ ಹುಳುಗಳು ಹರಳು ಗಿಡವನ್ನು ತುಂಬಾ ಕಾಡಿಸುತ್ತವೆ. ಎಲೆಚುಕ್ಕೆ ರೋಗ ಮತ್ತು ಬೆಂಕಿರೋಗಗಳೂ ಬರುವುದುಂಟು. ಈ ರೋಗ-ರುಜಿನಗಳನ್ನು ನಿಯಂತ್ರಿಸಲು ಬಹಳಷ್ಟು ಔಷಧಿಗಳಿವೆ. ಕೃಷಿ ವಿಸ್ತರಣಾಧಿಕಾರಿಗಳ ಶಿಪಾರಸ್ಸಿನ ಮೇರೆಗೆ ಈ ಮದ್ದುಗಳನ್ನು ಉದುರಿಸಿ/ಸಿಂಪರಿಸಿ ಇದನ್ನು ನಿಯಂತ್ರಿಸಬಹುದು. ಈ ಮೇಲಿನ ಕೃಷಿ ಪದ್ಧತಿಗಳನ್ನನುಸರಿಸಿ ಬೆಳೆದಾಗ ಹೆಕ್ಟೇರಿಗೆ 15 ರಿಂದ 20 ಕ್ವಿಂಟಾಲ್ ಇಳುವರಿ ತೆಗೆಯಲು ಸಾಧ್ಯ.

3. **ಸಾಸಿವೆ :** ಮಳೆಯಾಧಾರಿತ ಪ್ರದೇಶಗಳಲ್ಲಿ ಬೆಳೆಯಲು ಸೂಕ್ತವಾದ ಬೆಳೆ. ಈ ಬೆಳೆಯ ಬೇರಿನ ವ್ಯವಸ್ಥೆ ಉಳಿದ ಎಣ್ಣೆಬೀಜಗಳ ಬೆಳೆಯಂತೆ ಆಳವಾಗಿದ್ದು, ಜಮೀನಿನ ತೇವಾಂಶವನ್ನು ಚೆನ್ನಾಗಿ ಹೀರಿಕೊಂಡು ಅನಾವೃಷ್ಟಿಯ ಪರಿಸ್ಥಿತಿಗಳನ್ನು ಇದು ತಡೆದುಕೊಳ್ಳಬಲ್ಲದು, ಆದ್ದರಿಂದ ಇದು ಲಾಭದಾಯಕ. 'ಪೂಸಾ

ಕಲ್ಯಾಣಿ', 'ಆರ್ ಟಿ–10' 'ಆರ್ ಟಿ–16' ಮತ್ತು 'ಲಾಹ 101' ಇವು ಆರ್ಥಿಕ ಇಳುವರಿ ನೀಡುವ ತಳಿಗಳು. ಹೆಕ್ಟೇರಿಗೆ 60 ಕಿಲೋ ಸಾರಜನಕ, 40 ಕಿಲೋ $ಪಿ_2$ ಓ $_5$ ಮತ್ತು 30–40 ಕಿಲೋ $ಕೆ_2$ ಓ. ಗೊಬ್ಬರಗಳನ್ನ ನೀಡಿ ಅಕ್ಟೋಬರ್ ಮೊದಲ ಎರಡು ವಾರಗಳಲ್ಲಿ ಬಿತ್ತಬೇಕು. ಬಿತ್ತುವಾಗ 45×15 ಸೆಂ.ಮೀ. ಅಂತರ ವನ್ನು ಕಾಪಾಡಿಕೊಳ್ಳಬೇಕು. ಹೆಕ್ಟೇರಿಗೆ 6 ಕಿ.ಲೋ ಬಿತ್ತನೆ ಸಾಕು: ಸಾಸಿವೆ ಗಿಡಗಳಿಗೆ ಗಿಡಹೇನುಗಳ ಕಾಟ ಹೆಚ್ಚು. ಇವನ್ನು ನಿಯಂತ್ರಿಸಲು ಶೇ 0.1 ರ ಬಲದ ರೋಗರ್ ಅಥವ ಮೆಟಾಸಿಸ್ ಟಾಕ್ಸ್ ಅಥವ ಶೇ, 0.025 ರ ಬಲದ ಡೈಮೆಕ್ರಾನ್ ಅಥವ ಈ ಸಂಬಂಧಿ ಕೀಟನಾಶಕಗಳನ್ನು ಸಿಂಪರಿಸಬೇಕು. ಗಿಡಹೇನು ಗಳು ಸಂಪೂರ್ಣ ನಿಯಂತ್ರಣಕ್ಕೆ ಬರುವವರೆಗೂ ಸಿಂಪರಣೆಯನ್ನು ಆಗಾಗ್ಗೆ ಮುಂದು ವರಿಸಬೇಕು. ಈ ಮೇಲಿನ ಕೃಷಿ ಪದ್ಧತಿಗಳನ್ನನುಸರಿಸಿ ಬೆಳೆದಾಗ ಹೆಕ್ಟೇರಿಗೆ 15 ರಿಂದ 20 ಕ್ವಿಂಟಾಲ್ ಇಳುವರಿ ಪಡೆಯಬಹುದು.

4. **ಕುಸುಬೆ :** ಇದು ಮಳೆಯಾಧಾರಿತ ಪ್ರದೇಶಗಳಲ್ಲಿ ನಿರಾಯಾಸವಾಗಿ ಬೆಳೆಯಬಹುದಾದ ಸಾಂಪ್ರದಾಯಿಕ ಹಿಂಗಾರಿ ಎಣ್ಣೆಬೀಜದ ಬೆಳೆ. ಮಧ್ಯ ಪ್ರದೇಶ, ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ಈ ಬೆಳೆಯನ್ನು ಹೆಚ್ಚಾಗಿ ಬೆಳೆ ಯುತ್ತಾರೆ. ನಮ್ಮ ರಾಜ್ಯದಲ್ಲಿ ಕಲಬುರ್ಗಿ, ರಾಯಚೂರು, ಧಾರವಾಡ, ಬೆಳ ಗಾವಿ ಮತ್ತು ಬಿದರೆ ಜಿಲ್ಲೆಗಳಲ್ಲಿ ವಿಶೇಷವಾಗಿ ಬೆಳೆಯುತ್ತಾರೆ. ಈ ಬೆಳೆಯಿಂದ ಕಾಳಲ್ಲದೆ (ಎಣ್ಣೆ) ಮೇವೂ ಸಿಗುತ್ತದೆ. ಈ ಬೆಳೆಯಲ್ಲಿ ಹೆಚ್ಚು ಇಳುವರಿ ಕೊಡುವ ತಳಿಗಳೆಂದರೆ 'ಅಣ್ಣಿಗೇರಿ–೧' (೭-೧೩-೩), 'ಎ-200' ಮತ್ತು 'ಎಸ್ ೧೪೪'. ಇವು ೧೧೫ ರಿಂದ ೧೨೦ ದಿನಗಳಲ್ಲಿ ಕಟಾವಿಗೆ ಬರುತ್ತವೆ. ಮೊದಲಿನ ಎರಡು ತಳಿ ಗಳು ಕರ್ನಾಟಕದ ಮಣ್ಣಿಗೆ ಅತ್ಯಂತ ಸೂಕ್ತ. ಈ ತಳಿಗಳಲ್ಲದೆ 'ಕೆ–೬೫', ನಂ. ೭–೧೩–೩ ತಳಿಗಳೂ ಹೆಚ್ಚು ಇಳುವರಿ ನೀಡುತ್ತವೆ. ಮಳೆಯಾಧಾರಿತ ಬೆಳೆಯಾ ದರೆ ಮಣ್ಣಿನಲ್ಲಿ ಸಾಕಷ್ಟು ತೇವಾಂಶ ಇದ್ದಾಗ ಸೆಪ್ಟಂಬರ್ ಮಧ್ಯದಿಂದ ಅಕ್ಟೋ ಬರ್ ಅಂತ್ಯದವರೆಗೂ, ನೀರಾವರಿ ಬೆಳೆಯಾದರೆ ಅಕ್ಟೋಬರ್ ಮಧ್ಯದಿಂದ ನವಂ ಬರ್ ಮಧ್ಯದವರೆಗೂ ಬಿತ್ತನೆ ಮಾಡಬಹುದು. ಈ ಬಿತ್ತನೆಯನ್ನು ಮಾಡುವ ಮುನ್ನ ಎಕರೆಗೆ ೭೦೦೦ ಕಿಲೋ ಕಂಪೋಸ್ಟ್ / ಕೊಟ್ಟಿಗೆ ಗೊಬ್ಬರವನ್ನು ಮಣ್ಣಿಗೆ ಬೆರಸಬೇಕು. ಇದಲ್ಲದೆ ಎಕರೆಗೆ ೧೫ ಕಿಲೋ ಸಾರಜನಕ ೩ . ೨೦ ಕಿಲೋ ರಂಜಕ ಮತ್ತು ೧೦ ಕಿಲೋ ಪೊಟ್ಯಾಶ್ ರಸಗೊಬ್ಬರಗಳನ್ನು ನೀಡ ಬೇಕು. ರಸಗೊಬ್ಬರಗಳನ್ನು ನೀಡುವಾಗ ತಮ್ಮ ಜಮೀನಿನ ಮಣ್ಣಿನ ಪರೀಕ್ಷೆಯ ಫಲಿತಾಂಶಗಳಿಗನುಗುಣವಾಗಿ ಕೊಡುವುದು ಒಳ್ಳೆಯದು. ಕೊಟ್ಟಿಗೆ ಗೊಬ್ಬರ ಮತ್ತು ರಸಗೊಬ್ಬರಗಳನ್ನು ನೀಡಿದ ಬಳಿಕ ಬಿತ್ತನೆಯನ್ನು ೨ ಅಡಿ ಅಂತರದ ಸಾಲುಗಳಲ್ಲಿ (45 ಸೆಂ. ಮೀ.) ಬೀಜದಿಂದ ಬೀಜಕ್ಕೆ ೧೨ ಅಂಗುಲ ಅಂತರವನ್ನು ( 15 ಸೆಂ. ಮೀ.) ಕಾಯ್ದುಕೊಂಡು ಬಿತ್ತಬೇಕು. ಬಿತ್ತಿದ ಮೂವತ್ತು ದಿನಗಳ ಬಳಿಕ ಒಮ್ಮೆ

ಕ್ಕೆ ಕಳೆ ತೆಗೆಯಬೇಕು. ಅವಶ್ಯಕವೆನಿಸಿದರೆ 45 ದಿನಗಳ ಬಳಿಕ ಮತ್ತೊಮ್ಮೆ ಕಳೆ ತೆಗೆಯಬಹುದು. ಈ ಕ್ರಮಗಳನ್ನು ಅನುಸರಿಸಿ ಬೆಳೆದಾಗ ಎಕರೆಗೆ ೪ ರಿಂದ ೫ ಕ್ವಿಂಟಾಲು ಇಳುವರಿ ಸಾಧ್ಯ. ಈ ಬೆಳೆಯಿಂದ ಹೆಚ್ಚು ಇಳುವರಿ ಪಡೆಯಲು ಇಚ್ಛಿಸುವ ರೈತರು ಶಿಫಾರಸ್ಸು ಮಾಡಿದ ತಳಿಗಳನ್ನು ಬೆಳೆದು ನೀರಾವರಿ ಬೆಳೆಯಾದರೆ, ಹೆಕ್ಟೇರಿಗೆ 75 ಕಿಲೋ ಸಾರಜನಕ, 75 ಕಿಲೋ ರಂಜಕ ಮತ್ತು 37 . 5 ಕಿಲೋ ಪೊಟ್ಯಾಶ್ ಗೊಬ್ಬರಗಳನ್ನೂ; ಮಳೆಯಾಧಾರಿತ ಬೆಳೆಯಾದರೆ 37 . 5 ಕಿಲೋ ಸಾರಜನಕ, 50 ಕಿಲೋ ರಂಜಕ ಮತ್ತು 25 ಕಿಲೋ ಪೊಟ್ಯಾಶ್ ಗೊಬ್ಬರಗಳನ್ನು ನೀಡಬೇಕು. ಈ ಬೆಳೆ ಬೆಳೆಯಲು ಫಲವತ್ತಾದ ಜಮೀನೇ ಬೇಕಾಗಿಲ್ಲ. ನೀರು ನಿಲ್ಲದ ಜೌಗು ಪ್ರದೇಶಗಳನ್ನುಳಿದ ಯಾವುದೇ ಸುಮಾರಾದ ಜಮೀನಿನಲ್ಲಿ ಈ ಬೆಳೆಯನ್ನು ಬೆಳೆಯಬಹುದು. ದಿನೇ ದಿನೇ ಗಗನದತ್ತ ಸಾಗಿರುವ ಎಣ್ಣೆ ಕಾಳುಗಳ ಬೆಲೆಯನ್ನು ಗಮನದಲ್ಲಿಟ್ಟುಕೊಂಡು ನಮ್ಮ ರೈತರು ಈ ಬೆಳೆಯನ್ನು ಹೆಚ್ಚು ಹೆಚ್ಚು ಬೆಳೆದು ಲಾಭ ಗಳಿಸಬಹುದು.

---

## ದುರ್ಜನರ ಸಂಗವನ್ನು ಸೇರದಿರುವುದು

ತಿರುಕ್ಕುರಳ್‌ನಿಂದ —ನ. ಮುನಿಸ್ವಾಮಿ

ತಮಿಳು : ಶಿಟ್ರಿನಂ ಅಂಜುಂ ಪೆರುಮೈ; ಶಿರುಮೈದಾನ್
ಶಿಟ್ರಿಮಾ ಚ್ಯೂಳ್‌ನ್ದು ವಿಡುಂ.

ಕನ್ನಡ : ದುರ್ಜನರ ಸಂಗಕ್ಕಂಜುವರು ಸಜ್ಜನರು; ದುರ್ಜನರು ಅವರನ್ನು ಬಳಗದೊಲು ಬಳಸುವರು.

ವ್ಯಾಖ್ಯಾನ : ಹಿರಿಯರ ಸಹಜವಾದ ಗುಣ, ಅಲ್ಪರ ಸಂಗಕ್ಕಂಜಿ ಅವರಿಂದ ದೂರವಾಗಿರುವುದು; ಅಲ್ಪರ ಸಹಜವಾದ ಗುಣ, ಅವರನ್ನು ತಮ್ಮ ಬಂಧು ವರ್ಗದಂತೆ ಬಳಸಿಕೊಳ್ಳುವುದು.

## ಪತ್ನಿ ದಾಸ್ಯ

ತಮಿಳು : ನಟ್ಟಾರ್ ಕುರೈ ಮುಡಿಯಾರ್, ನನ್ರು ಆಟ್ರಾರ್, ನನ್ನುದಲಾಳ್
ಪೆಟ್ಟಾಂಗು ಒಳಾಗುಬವರ್.

ಕನ್ನಡ : ನೇಹಿಗರಿಗೆ ನೆರವನೀಯರು, ನಲ್ಮೆಗೆಯ್ಯರು, ನಲ್ನೊಸಲನಲ್ಲೆ ಸೊಲ್ಲಂತೆ ನಡೆವವರು.

ವ್ಯಾಖ್ಯಾನ : ತಮ್ಮ ಹೆಂಡಂದಿರ ದಾಸರಾಗಿ ನಡೆಯುವ ಗಂಡಂದಿರು ತಮ್ಮ ಆಪ್ತ ಗೆಳೆಯರಿಗೆ ಬೇಕಾದ ಸಹಾಯವನ್ನು ಮಾಡಲಾರರು; ಮತ್ತು ಪರ ಸುಖಕ್ಕೆ ಕಾರಣವಾದ ಇನ್ಯಾವ ಧರ್ಮವನ್ನೂ ಮಾಡಲಾರರು.

# ಆರೋಗ್ಯ ಭಾಗ್ಯ

—ಡಾ|| ಸಿ. ಅಶ್ವಥ್

ಪ್ರಶ್ನೆ :– ನನಗೆ ಈಗ 60 ವರ್ಷ. ಸುಮಾರು 8 - 10 ವರ್ಷಗಳಿಂದ ಸಕ್ಕರೆರೋಗದಿಂದ ನರಳುತ್ತಿದ್ದೇನೆ. ಇಂಜಕ್ಷನ್, ಮಾತ್ರೆ, ಮಿತ ಆಹಾರ ನನ್ನ ನಿತ್ಯಬಳಕೆ. ಶಾಶ್ವತ ಪರಿಹಾರಕ್ಕಾಗಿ ನಿರೀಕ್ಷಿಸುತ್ತೇನೆ.

—ಡಿ. ಪಿ. ಎಂ. ಆರಾಧ್ಯ, ದೊಡ್ಡಗುಣಿ

ಉತ್ತರ :– ನೀವು ಮೂತ್ರ ಮತ್ತು ರಕ್ತವನ್ನು ಪರೀಕ್ಷೆ ಮಾಡಿಸುತ್ತಿರುವುದು ಕ್ಷೇಮ. ಸಾಧ್ಯವಾದರೆ ನೀವೆ ಮನೆಯಲ್ಲಿ ನಿತ್ಯವೂ ಮೂತ್ರವನ್ನು ಪರೀಕ್ಷೆ ಮಾಡಿಕೊಳ್ಳಬಹುದು. ರಕ್ತವನ್ನು ತಿಂಗಳಿಗೊಮ್ಮೆ ಪರೀಕ್ಷಿಸಿದರೆ ಒಳ್ಳೆಯದು. ವಯಸ್ಸಾದವರಲ್ಲಿ ಬರುವ ಸಕ್ಕರೆ ಖಾಯಿಲೆ ( DIABETES ) ಅನೇಕ ಬಾರಿ ಸಂಪೂರ್ಣವಾಗಿ ಗುಣವಾಗಿದೆ. ಅಕಸ್ಮಾತ್ ಗುಣವಾಗದಿದ್ದರೆ ನೀವು ತೆಗೆದುಕೊಳ್ಳುತ್ತಿರುವ ಚಿಕಿತ್ಸೆಯನ್ನೇ ಮುಂದುವರಿಸುತ್ತಿರಿ. “ಶಾಶ್ವತ ಪರಿಹಾರ” ಎಂಬ ತಪ್ಪು ದಾರಿಗೆ ಎಳೆಯುವ ಪ್ರಚಾರಗಳಿಗೆ ದಯುಪಿಟ್ಟು ಮರುಳಾಗಬೇಡಿ.

ಪ್ರಶ್ನೆ :– ವಯಸ್ಸು 33. ಒಂದು ವರ್ಷದಿಂದ ಸಕ್ಕರೆ ಹೋಗುತ್ತಿದೆ. ಈಗ ಒಂದು ವಾರದಿಂದ ಒಂದು ನಾಯವಾಗಿ ಬಹಳ ನರಳಿಕೆಯುಂಟಾಗಿದೆ. ಸಲಹೆಯನ್ನು ಬೇಡುತ್ತೇನೆ.

—ಕೃಷ್ಣಮೂರ್ತಿ, ತುಮಕೂರು

ಉತ್ತರ :– ಸಕ್ಕರೆ ರೋಗದವರು ಗಾಯಗಳಾಗದಂತೆ ಎಚ್ಚರಿಕೆಯಿಂದಿರುವುದು ಒಳ್ಳೆಯದು. ಮೂತ್ರ ಮತ್ತು ರಕ್ತ ಪರೀಕ್ಷೆಗಳನ್ನು ಮೇಲಿನಂತೆ ಪರೀಕ್ಷಿಸುತ್ತಿರಿ. ಗಾಯ ಅಥವಾ ಇನ್ನಾವುದೇ ರೀತಿಯ ನಂಜು ಆದಾಗ, ರಕ್ತದಲ್ಲಿ ಸಕ್ಕರೆಯ ಪ್ರಮಾಣವೂ ಹೆಚ್ಚುವ ಸಂಭವವಿರುತ್ತದೆ. ಈ ರೋಗದವರಿಗೆ ಗಾಯಗಳು ಬೇಗ ಗುಣವಾಗುವುದಿಲ್ಲ. ಗಾಯದ ಚಿಕಿತ್ಸೆ ಅದರ ಸ್ವರೂಪದ ಮೇಲೆ ಅವಲಂಬಿಸಿರುತ್ತದೆ. ಗಾಯವನ್ನು ನೋಡದೆ ಸಕ್ಕರೆ ಪ್ರಮಾಣವನ್ನು ತಿಳಿಯದೆ ಸಲಹೆ ಮಾಡುವುದು ಒಳ್ಳೆಯದಲ್ಲ. ಆದ್ದರಿಂದ ಗಾಯವನ್ನು ವೈದ್ಯರಿಗೆ ತೋರಿಸಿ ಗಾಯಕ್ಕೂ ಮತ್ತು ಸಕ್ಕರೆಯ ಪ್ರಮಾಣಕ್ಕೂ ಸೂಕ್ತ ಚಿಕಿತ್ಸೆ ಪಡೆಯುವುದು ಉತ್ತಮ.

# ಮರಳಿ ಬಂದ ಸೌಭಾಗ್ಯ

—ಶ್ರೀಮತಿ ಬಿ. ಎನ್. ಜಯಾಶಂಕರ್

ಇಲ್ಲಿಯವರೆಗೆ ....................

ಮೈಸೂರಿನ ಚಂದ್ರಪ್ಪನವರ ಒಬ್ಬನೇ ಮಗನಾದ ಮೋಹನ್ ಉಜ್ವಲ ರಾಷ್ಟ್ರಪ್ರೇಮವುಳ್ಳ ಯುವಕ. ತಂದೆಯವರ ಇಚ್ಛೆಗೆ ಮಣಿದು ವಿವಾಹಕ್ಕೆ ಸಮ್ಮತಿಸಿ, ಸುಧೀರ್‌ನ ತಂಗಿ ಉಷೆಯನ್ನು ಧರ್ಮ ಪತ್ನಿಯಾಗಿ ಸ್ವೀಕರಿಸಿದ. ಮನದನ್ನೆಯ ಜೊತೆಯಲ್ಲಿ ಮನತುಂಬಿ ತಣಿಯುವ ಮುನ್ನ ಕರ್ತವ್ಯದ ಕಡೆಗೆ ಶರಣಾಗಿ ಉಷೆಯನ್ನು ಅಗಲುತ್ತಾನೆ. ಮೊದಲೇ ಪ್ರಾಣವಾಗಿವುಳ್ಳ ಸ್ವಾತಿಕ ಜೀವಿ ಸೊಸೆ ಉಷೆಯ ಭವಿಷ್ಯಕ್ಕೆ ಸಿದ್ಧಮಾಡಿ, ತನ್ನ ವಂಶಗೌರವದ ರಕ್ಷಣೆಯ ಜವಾಬ್ದಾರಿಯನ್ನು ಅಕೆಗೆ ಒಪ್ಪಿಸಿ ಗೀತಾಪಠಣ ಮಾಡುತ್ತಾ ಇಚ್ಛಾಮರಣಿಯಾಗಿ ಚಿರನಿದ್ದೆಗೈದರು. ಉಷೆಯ ಅಣ್ಣ ಸುಧೀರ್ ವಿಶ್ವನಾಥಯ್ಯನವರ ಸಹಕಾರದಿಂದ ಅಂತ್ಯ ಸಂಸ್ಕಾರ ಮುಗಿಸಿ ದುಃಖದಲ್ಲಿ ಮುಳುಗಿರುವಾಗ ಮೋಹನನ ಶಾಶ್ವತ ಅಗಲಿಕೆ ಎಲ್ಲರಿಗೂ ಹುಣ್ಣಿನ ಮೇಲೆ ಬರೆ ಎಳೆದಂತಾಯಿತ್ತು ಅವನ ಉಡುಪು ಮತ್ತು ಫೋಟೋಗಳು ವಿಳಾಸಕ್ಕೆ ತಲುಪಿದಾಗ.

ಮೋಹನನವರ ಮರಣದಿಂದ ಕಂಗೆಟ್ಟು ಕುಳಿತಿದ್ದ ಉಷೆಗೆ ಕಣ್ಣು ಮುಚ್ಚಿದರೆ ಸಾಕು, ಕೆಟ್ಟ ಕನಸುಗಳು ಬಿದ್ದು ಅವಳನ್ನು ನಡುಗಿಸುತ್ತಿದ್ದವು. ಎಂದಿನಂತೆ ಎದ್ದು ಸ್ನಾನಮಾಡಿ, ದೇವರ ಕೋಣೆ ಸ್ವಚ್ಛಗೊಳಿಸಿ, ಪೂಜೆಗೆ ಅಣಿಮಾಡಿಕೊಂಡು ಕುಳಿತ ಉಷೆಗೆ ಅಂದು ಹೇಳಲಾಗದ ಸಂಕಟ. ಪೂಜೆಮಾಡುತ್ತಿದ್ದಂತೆಯೇ ತೂಕಡಿಸಲಾರಂಭಿಸಿದಳು. ಯಾರೋ ಅವಳ ಮಾಂಗಲ್ಯವನ್ನು ಕಿತ್ತೆಸೆದಂತಾಯಿತು. ಬೆಚ್ಚಿಬಿದ್ದ ಉಷೆ, ಅಯ್ಯೋ! ಅಣ್ಣ ನನ್ನ ಮಾಂಗಲ್ಯವನ್ನು ಯಾರೋ ಕಿತ್ತು ಹಾಕಿದಂತಾಯಿತು, ನನ್ನ ಗತಿ ಮುಗಿಯಿತು. ಎಂದು ಹೇಳುತ್ತಿದ್ದಂತೆಯೇ ಪ್ರಜ್ಞೆತಪ್ಪಿ ಉರುಳಿದಳು, ಅಯ್ಯೋ ದೇವರೆ ಇನ್ನಾವ ಅನಿಷ್ಟ ಕಾದಿದೆಯೋ ಎಂದು ಪ್ರಲಪಿಸಿದ ಸುಧೀರ್.

ತಂಗಿಯನ್ನು ತಂದು ಮಂಚದ ಮೇಲೆ ಮಲಗಿಸಿದ ಅವನ ದುಃಖ ಮುಗಿಲು ಮುಟ್ಟಿತ್ತು. ಕಣ್ಣಿನಲ್ಲಿ ಒಂದೇ ಸಮನೆ ನೀರು ಸುರಿಯುತ್ತಿತ್ತು. ತಾಯಿ ಬೇರೆ

ಹೃದಯ ಶೂಲೆಯಿಂದ ನರಳುತ್ತಿದ್ದರು. ಅವನಿಗೆ ದಿಕ್ಕುತೋಚದಂತಾಗಿ ಸ್ನೇಹಿತ ವಿಜಯನನ್ನು ಜ್ಞಾಪಿಸಿಕೊಂಡು ಪತ್ರ ಬರೆಯಲು ಕುಳಿತ.

ಹೊರಗಡೆ ಜೀಪಿನ ಹಾರನ್ ಎಡೆಬಿಡದೆ ಕೇಳಿಸುತ್ತಿತ್ತು. ಯಾರದಿರಬಹುದೆಂದುಕೊಂಡು ಬಾಗಿಲು ತೆರೆದ. ಪೋಲೀಸ್ ಜೀಪಿನಿಂದ ಇಬ್ಬರು ಇನ್‌ಸ್ಪೆಕ್ಟರು, ನಾಲ್ಕು ಮಂದಿ ಪೋಲೀಸರು ಇಳಿದು ಬಂದರು. ಕ್ಯಾಪ್ಟನ್ ಮೋಹನರ ಮನೆ ಇದೆ ತಾನೇ ? ಎಂದು ಕೇಳಿದರು. ಹೌದು, ಇದೆ ಅವರ ಮನೆ, ಎಂದ ಸುಧೀರ್ ಮೋಹನನ ಸಮವಸ್ತ್ರ ಧರಿಸಿದ ಫೋಟೋ ಹಾಗೂ ಅವನ ಉಡುಪನ್ನು ತಂದು ಒಳಗಡೆ ಇಟ್ಟರು. ದಂಡನಾಯಕ 'ಷಾ' ರವರ ಸ್ವಹಸ್ತದಿಂದ ಬರೆದು ಕಳುಹಿಸಿದ್ದ ಸಂತಾಪ ಸೂಚಕ ಪತ್ರ ಕೊಟ್ಟರು.

ಮೋಹನನ ಫೋಟೋಕ್ಕೆ ಹೂವಿನ ಹಾರವನ್ನು ಹಾಕಿ ಮಿಲಿಟರಿ ಸೆಲ್ಯೂಟ್ ಹೊಡೆದರು. ಮೋಹನನ ತಂದೆಯವರನ್ನು ಕಾಣಬೇಕೆನ್ನಲು, ಹಿಂಬಾಲಿಸಿ ಬಂದಿದ್ದ ಪಕ್ಕದ ಮನೆಯ ಶ್ರೀನಿವಾಸರಾಯರು, 'ಅವರು ತೀರಿಹೋಗಿ ಇಂದಿಗೆ 15 ದಿನಗಳಾದವು,' ಎಂದು ಹೇಳಿದರು. ಇನ್ನು ಅವರಿಗೆ ಸಂಬಂಧಪಟ್ಟವರು ಈ ಮನೆಯಲ್ಲಿ ಯಾರಿದ್ದಾರೆ ? ಎನ್ನಲು ನನ್ನ ತಂಗಿಯನ್ನು ಮೋಹನರಿಗೇ ಕೊಟ್ಟಿದ್ದುದು, ನನಗೆ ಅವರು ಭಾವಮೈದುನರಾಗಬೇಕು ಎಂದ ಸುಧೀರ್ ಗದ್ಗದಿತನಾಗಿ ಹೇಳಿದ.

ಏನೇ ಆಗಲಿ ಭಗವಂತನ ಇಚ್ಛೆಯನ್ನು ಯಾರೂ ಮೀರಲಾಗುವುದಿಲ್ಲ ಧೈರ್ಯ ವಹಿಸಿ ನಿಮ್ಮ ತಂಗಿಗೆ ನೀವೇ ಸಮಾಧಾನ ಹೇಳಿ, ನಮ್ಮ ವಂದನೆಗಳನ್ನು ತಿಳಿಸಿ ಮತ್ತೆ ಬಂದು ನಿಮ್ಮನ್ನು ಕಾಣುತ್ತೇವೆ, ಎಂದು ಹೇಳಿ ಹೊರಟು ಹೋದರು. ಸುಧೀರ ಶ್ರೀನಿವಾಸರಾಯರಿಗೆ ವಿಜಯನ ಅಡ್ರೆಸ್ ಕೊಟ್ಟು ಟೆಲಿಂಗ್ರಾಂ ಮಾಡಲು ಹೇಳಿದ. ಆಗಲಿ ಸಾರ್, ಮಾಡಿ ಬರುತ್ತೇನೆ ಎಂದು ಪಂಚೆಯ ತುದಿಯಲ್ಲಿ ಕಣ್ಣೊರೆಸುತ್ತಾ ಹೋದರು. ಬೀದಿಯವರೆಲ್ಲಾ ಬಂದು ವಿಷಯ ತಿಳಿದು ಶೋಕಿಸಿದರು. ಅವನು ಫೋಟೋಗೆ ಹಾರಗಳನ್ನು ಹಾಕಿ ತಮ್ಮ ಅಂತಿಮ ಗೌರವ ಸೂಚಿಸಿದರು. ಕಣ್ಣೀರು ಹರಿಸಿದರು.

ಸುಧೀರನ ಚೇತನವೆಲ್ಲಾ ಉಡುಗಿಹೋಗಿತ್ತು. ತಲೆಯ ಮೇಲೆ ಕೈ ಹೊತ್ತು ಕುಳಿತ. ಯಾರಿಗೆ ಸಮಾಧಾನ ಹೇಳಲಿ ? ತನಗೇ ಯಾರಾದರೂ ಹೇಳಿದರೆ ಸಾಕಾಗಿತ್ತು, ಎಂದುಕೊಂಡ. ಈ ವೇಳೆಗೆ ವಿಜಯನಿಗೆ ಟೆಲಿಗ್ರಾಂ ಸೇರಿರಬಹುದೇ ? ಇಷ್ಟೆಲ್ಲಾ ಆದರೂ ಉಷಾಗೆ ಇನ್ನೂ ಎಚ್ಚರವಾಗಿರಲಿಲ್ಲ. ಅವಳನ್ನು ಎಚ್ಚರಗೊಳಿಸಲು ಯಾರಿಗೂ ಧೈರ್ಯವಾಗಲಿಲ್ಲ.

ಇದ್ದಕ್ಕಿದ್ದಂತೆಯೇ ಪಾರ್ವತಮ್ಮನವರಿಗೆ ಹೃದಯಶೂಲೆ ಹೆಚ್ಚಾಯಿತು. ಡಾಕ್ಟರನ್ನು ಕರೆತರಲು ಒಬ್ಬರನ್ನು ಕಳುಹಿಸಿದ. ಡಾಕ್ಟರ್ ಸಂಪತ್ ಬಂದು ಪರೀ

ಕ್ಷಿಸಿದರು. ಇನ್‌ಜಕ್ಷನ್ ಕೊಟ್ಟು ಹೇಳಿದರು, 'ಇವರನ್ನು ಹುಷಾರಾಗಿ ನೋಡಿಕೊಳ್ಳಿ, ಇಲ್ಲದಿದ್ದರೆ ತೊಂದರೆಯಾಗುತ್ತದೆ,' ಹೃದಯ ಬಹಳ ವೀಕ್ (weak) ಆಗಿದೆ ಎಂದರು.

ಹೋಗುವಾಗ, ಹಾರ ಹಾಕಿದ್ದ ಮೋಹನನ ಫೋಟೋ ನೋಡಿದರು. ಅವರಿಗೆ ಶಾಕ್ ಹೊಡೆದಂತಾಯಿತು, ಸುಧೀರ್‌ನನ್ನು ಪ್ರಶ್ನಾರ್ಥಕವಾಗಿ ನೋಡಿದರು, ವಿಷಯ ತಿಳಿಸಲು ನೊಂದುಕೊಂಡು ನುಡಿದರು, 'ಮೋಹನ ನನ್ನ ಆತ್ಮೀಯ ಗೆಳೆಯ ಬಾಲ್ಯದಿಂದಲೂ ನಾವು ಒಂದಿಗೇ ಆಡಿ, ಓದಿದೆವು, ಎಂಥಹ ಅನಾಹುತವಾಯಿತು, ಎಂದು ತಮ್ಮ ಗೆಳೆಯನ ಕಣ್ಮರೆಗೆ ಸಂತಾಪ ಸೂಚಿಸಿ, ನನ್ನಿಂದ ಏನಾದರೂ ಸಹಾಯ ಬೇಕಿದ್ದರೆ ಹೇಳಿ ಕಳುಹಿಸಿ, ಸಂಕೋಚಪಡಬೇಡಿ, ಎಂದರು. ಗೆಳೆಯನ ಫೋಟೋಗೆ ವಂದಿಸಿ, ಅವನ ಆತ್ಮಕ್ಕೆ ಚಿರಶಾಂತಿಯನ್ನು ಕೋರಿ ಹೊರಟರು ಡಾಕ್ಟರ್ ಸಂಪತ್. ಸುಧೀರ, ಬಲವಂತದಿಂದ ತಾಯಿಗೆ ಒಂದಿಷ್ಟು ಗ್ಲೂಕೋಸ್ ಕುಡಿಸಿದ. ತಂಗಿಯನ್ನು ಎಬ್ಬಿಸಲು ಮನಸ್ಸು ಬರಲಿಲ್ಲ. ಸಂಜೆಯ ವೇಳೆಗೆ ಉಷಾಗೆ ಎಚ್ಚರವಾಯಿತು. ಕತ್ತಲಾಗುತ್ತಾ ಬಂತು, ಇಷ್ಟು ಹೊತ್ತಾದರೂ ನನಗೆ ಎಚ್ಚರವಾಗಲಿಲ್ಲವಲ್ಲಾ ? ಅಣ್ಣನಾದರೂ ಎಬ್ಬಿಸಬೇಡವೇ ? ಹೋಗಲಿ ದೀಪ ಹಾಕಬಾರದೆ ಎಂದು ಹಾಸಿಗೆಯಿಂದ ಬೆಡ್‌ಷೀಟ್ ಸರಿಸಿ ಮೇಲೆದ್ದಳು. ಪಾಪ, ಅವಳಿಗೇನು ಗೊತ್ತು, ತನ್ನ ಬಾಳಿನ ಜ್ಯೋತಿ ನಂದಿದೆ ಎಂದು ? ರೂಮಿನ ಲೈಟ್ ಹಾಕಿದಳು. ತಾಯಿ-ಅಣ್ಣನ ಸದ್ದಿಲ್ಲ ಕತ್ತಲಲ್ಲಿ ಏನು ಮಾಡುತ್ತಿದ್ದಾರೆ? ಎಂದು ಗೊಣಗುಟ್ಟುತ್ತಾ ಹಾಲಿನ ದೀಪ ಹಾಕಿದಳು ಟ್ಯೂಬ್‌ಲೈಟ್ ಜಗ್ಗನೆ ತನ್ನ ಪ್ರಕಾಶ ಚೆಲ್ಲಿತು.

ಸುಧೀರ ಹಾಲಿನಲ್ಲಿ ಕುಳಿತು ತನ್ನ ತಂಗಿಯ ಮುಂದಿನ ಬಾಳು ಯಾವ ರೀತಿ ಸಾಗಬೇಕು ? ಅವಳ ವೈಧವ್ಯವನ್ನು ನೆನೆದು ಅವನ ಮನ ನಡುಗಿತು. ಅಯ್ಯೋ ದೇವರೆ, ಇಷ್ಟು ಚಿಕ್ಕವಯಸ್ಸಿಗೆ ಎಂತಹ ಘೋರ ವಿಪತ್ತನ್ನು ಅನುಭವಿಸಬೇಕಾಯಿತು? ಇನ್ನು ನಿಜವಾಗಿ ಬದುಕುಳಿಯುವಳೆ ? ತಾಯಿಯ ಸ್ಥಿತಿಯೂ ಸರಿಯಿಲ್ಲ, ನನ್ನ ಗತಿ ಏನಾಗಿ ಹೋಯಿತು, ಎಂದು ಯಾವ ದಾರಿಯೂ ಟಕ್ಕದೆ ದೀರ್ಘವಾಗಿ ಯೋಚಿಸುತ್ತಿದ್ದ. ಅಷ್ಟರಲ್ಲಿ ಉಷೆ ಎದ್ದು ಬಂದು ಲೈಟ್ ಹಾಕಿದಳು. ದೀಪ ಹಚ್ಚಿದ ಕೂಡಲೆ ಅವಳಿಗೆ ಯಾವಾಗಲೂ ದೇವರ ಫೋಟೋ ನಂತರ ಪತಿಯ ಫೋಟೋ ನೋಡುವ ರೂಢಿ, ಅಂದು ಪತಿಯ ಫೋಟೋದೆಡೆಗೆ ನೋಡಿದಾಗ, ಜೀವಂತವಾಗಿ ನಸುನಕ್ಕಂತೆ ಅವಳಿಗೆ ಭಾಸವಾಯಿತು.

ಚಿಂತೆಯ ಭಾರದಿಂದ ಕುಳಿತ ಅಣ್ಣನೆಡೆಗೆ ನೋಡಿ, 'ಇದೇಕಣ್ಣ ಇಷ್ಟೊತ್ತಾದರೂ ಎಬ್ಬಿಸದೆ ಹೀಗೆ ಕುಳಿತಿದ್ದೀರಿ ? ಅಮ್ಮನೆಲ್ಲಿ ? ಎನ್ನುತ್ತಾ ಮುಖ ತೊಳೆದು ದೀಪ ಹಚ್ಚೋಣವೆಂದು ಒಳಹೊರಟಳು. ಅವಳ ನೋಟ ಟೇಬಲ್ ಮೇಲಿದ್ದ

ಮೋಹನನ ಫೋಟೋದೆಡೆಗೆ ಸರಿಯಿತು. ಸಾಕಷ್ಟು ಹಾರಗಳಿಂದ ತುಂಬಿದ್ದ ಅದನ್ನು ನೋಡಿ ಅವಳಿಗೆ ವಿಸ್ಮಯವಾಯಿತು. ಇದೇಕೆ ಇಲ್ಲಿ ಎಂದು ಕಣ್ಣರಳಿಸಿ ನೋಡಿದಳು. ಅವನ ಮಿಲಿಟರಿ ಸಮವಸ್ತ್ರವೂ ಸನಿಹದಲ್ಲಿ ಕಾಣಿಸಿತು. ಹತ್ತಿರ ಬಂದು ನೋಡಿದಳು ದಂಡನಾಯಕ ಬರೆದಿದ್ದ ಸಂತಾಪಸೂಚಕ ಪತ್ರ ಮುಂದೆಯೇ ಇತ್ತು. ಬಿರಬಿರನೆ ತೆಗೆದು ನೋಡಿದಳು. ಅವಳಿಗೀಗ ಕಟು ಸತ್ಯವೆಲ್ಲಾ ತಿಳಿದಂತಾಯಿತು.

ಕಣ್ಣಿಗೆ ಕತ್ತಲೆ ಆವರಿಸಿ ಬಂತು. ಒಂದು ಬಾರಿ ಮಾತ್ರ ನನ್ನನ್ನೂ ಕರೆದುಕೊಳ್ಳಿ, ನೀವಿಲ್ಲದೆ ನಾನಿರಲಾರೆ, ಈ ಬಾಳು ನನಗೆ ಬೇಕಿಲ್ಲ ಎಂದವಳೇ ದೊಪ್ಪನೆ ನೆಲದ ಮೇಲುರುಳಿದಳು ಉಷೆ. ಸುಧೀರನ ಕಣ್ಣುಗಳು ಕಂಬನಿಯ ಮಡುವಾಗಿದ್ದವು. ಆ ವೇಳೆಗೆ ರಿಕ್ಷಾಹಿಡಿದು ಬಂದ ವಿಜಯ ಇಲ್ಲಿ ಮಿಲಿಟರಿ ಅಧಿಕಾರಿ ಮೋಹನರ ಮನೆ ಯಾವುದು ಎಂದು ಹತ್ತಿರ ನಿಂತಿದ್ದವರನ್ನು ಕೇಳಿದ ಇದೇ ಅವರ ಮನೆ, ಎಂದು ಹೇಳಿದರು. ಒಳಗೆ ಬಂದ ವಿಜಯ ಗೆಳೆಯನ ಕಂಗೆಟ್ಟ ಮುಖ ನೋಡಿ ಶೋಕತಪ್ತನಾದ. ಆದರೆ ವಿಧಿಯ ಸಂಕಲ್ಪವನ್ನು ಮೀರಲು ಯಾರಿಗೂ ಸಾಧ್ಯವಿಲ್ಲ. ಈ ಸಮಯದಲ್ಲಿ ನಾನೂ ಅಧೀರನಾದರೆ ಸರಿಯಲ್ಲ. ಎಂದು ಯೋಚಿಸಿ ಸುಧೀರನ ಬಳಿಬಂದು ಕೈಹಿಡಿದು ನಿಂತ. ವಿಜಯನನ್ನು ನೋಡಿದ ನಂತರ ಪ್ರಯಾಸದಿಂದ ನುಡಿದ, ಸುಧೀರ, 'ಅಂತೂ ಗೆಳೆಯನನ್ನು ಕೈಬಿಡದೆ ಬಂದೆಯಲ್ಲ,' ಸುಧೀರನನ್ನು ತೊಳತೆಕ್ಕೆಯಲ್ಲಿ ಹಿಡಿದು ವಿಜಯನೆಂದ, 'ಇದರಲ್ಲಿ ನಿನಗೆ ಸಂಶಯವೇ ? ಕಷ್ಟಗಳು ಮನುಷ್ಯನಿಗಲ್ಲದೆ ಮರಕ್ಕೆ ಬರುತ್ತದೆಯೇ, ಹೀಗೆ ದುಃಖಿಸುತ್ತಾ ಕುಳಿತರೆ ಉಳಿದವರ ಗತಿ ಏನು ? ಎನ್ನುತ್ತಾ ಸಂತೈಸಿದನು. ಸುಧೀರನ ಸಹಾಯದಿಂದ ಉಷೆಯನ್ನು ಎತ್ತಿ ಮಂಚದ ಮೇಲೆ ಮಲಗಿಸಿ ಡಾಕ್ಟರನ್ನು ಕರೆಯ ಹೇಳಿದನು.

ಹೊರಗೆ ಬಂದು ಮೋಹನನ ಫೋಟೋವನ್ನು ನೋಡಿ ನಿಟ್ಟುಸಿರಿಟ್ಟ. ವಿಜಯ. ಮಿಲಿಟರಿ ಪೋಷಾಕಿನಲ್ಲಿ ಅವನ ತೇಜಃಪುಂಜವಾದ ಮುಖವನ್ನು ನೋಡಿ ಭಾರತ ಮಾತೆಯ ದಾಸ್ಯ ಶೃಂಖಲೆಯನ್ನು ಕಿತ್ತೊಗೆಯಲು ಇಂತಹ ಎಷ್ಟು ಮಂದಿ ವೀರರು ತಮ್ಮ ಪ್ರಾಣತ್ಯಾಗ ಮಾಡಬೇಕಾಯಿತು ? ಎಷ್ಟು ಮಂದಿ ಮಾತೆಯರು, ಪತ್ನಿಯರೂ ತಮ್ಮ ತಮ್ಮ ಮಕ್ಕಳನ್ನೂ ಪತಿಗಳನ್ನೂ ಕಳೆದುಕೊಂಡು ತಲ್ಲಣಿಸುತ್ತಿದ್ದಾರೋ ? ನೂರು ವರ್ಷ ಸ್ವಾರ್ಥಕಾಗಿ ಬದುಕುವುದಕ್ಕಿಂತಲೂ, ದೇಶಕ್ಕೋಸ್ಕರ ಒಂದು ದಿನ ಬದುಕಿದರೆ ಸಾಕು, ಎಂದು ನಗುನಗುತ್ತಾ ವೀರ ಮರಣವನ್ನು ಅಪ್ಪಿದ್ದ ವೀರ ಮೋಹನ. ಇಂತಹ ಬಾಳನ್ನೇ ಆರಿಸಿಕೊಂಡು ತನ್ನ ಜೀವನವನ್ನು ಸಾರ್ಥಕಪಡಿಸಿಕೊಂಡ. ಅವನ ಸಾವಿಗೆ ತನ್ನ ಕಂಬನಿಯ ಕಾಣಿಕೆಯನ್ನು ಅರ್ಪಿಸಿದ ವಿಜಯ.

ಡಾಕ್ಟರ್‌ರೊಡಗೂಡಿ ಬಂದ ಸುಧೀರ ತನ್ನ ತಂಗಿಯ ರೂಮಿಗೆ ಕರೆದು ಕೊಂಡು ಹೋದ, ಉಷೆಯನ್ನು ಪರೀಕ್ಷಿಸಿ ಗಾಬರಿಯಿಂದ, 'ಈ ರೀತಿ ಮನಸ್ಸಿನ ಮೇಲೆ ಆಘಾತವಾಗಿ ಪ್ರಜ್ಞಾಹೀನರಾಗಿದ್ದಾರೆ. ಬೆಳಗಿನವರೆವಿಗೂ ಎಬ್ಬಿಸಬೇಡಿ,' ಎಂದು ಹೇಳಿ ನಿದ್ರೆ ಬರಲು ಇನ್‌ಜೆಕ್ಷನ್ ಕೊಟ್ಟರು. ನಾಳೆ ಬೆಳಗ್ಗೆ ಮತ್ತೆ ಬರುತ್ತೇನೆ ಎನ್ನುತ್ತಾ ಹೊರಟರು ಡಾಕ್ಟರ್. ತನ್ನ ತಂಗಿಯ ಬಾಳನ್ನು ನೆನೆದು ಶೋಕಿಸುತ್ತಿದ್ದ ಸುಧೀರನಿಗೆ, 'ಸಧ್ಯಕ್ಕೆ ಯಾವ ಚಿಂತೆಯನ್ನು ಮಾಡಬೇಡ, ನಿನ್ನ ತಂಗಿಯ ಮನಸ್ಸು ಸ್ವಲ್ಪದಿನ ಸುಧಾರಿಸಲಿ, ಆಮೇಲೆ ಯೋಚನೆ ಮಾಡೋಣ, ಈಗ ಮಲಗೋಣ ಆಗಲೇ 10 ಗಂಟೆಯಾಗಿದೆ, ಎಂದು ವಿಜಯ ಗೆಳೆಯನ ಕೈ ಹಿಡಿದು ಮಲಗಲು ಕರೆದೊಯ್ದು' ಅವನ ಸಮೀಪದಲ್ಲಿ ಹಾಸಿಗೆ ಹಾಸಿಕೊಂಡು ಮಲಗಿದ. ಸುಧೀರನಿಗೆ ಗೆಳೆಯನ ಬರುವಿಕೆಯೇ ಚೇತನದಾಯಕವಾಗಿತ್ತು. ನೊಂದು ಬಳಲಿದ್ದ ಅವನ ಮನಸ್ಸು ನಿದ್ರಾದೇವಿಯ ವಶವಾಯಿತು, ಮಗಳಿಗಾದ ವಿಪತ್ತು ಪಾರ್ವತಮ್ಮನವರ ಮನಸ್ಸಿನ ಮೇಲೆ ತೀವ್ರ ಆಘಾತವಾಗಿತ್ತು. ಅವರಿಗೆ ಶಕ್ತಿಯೇ ಉಡುಗಿಹೋಗಿತ್ತು, ಜೀವಚ್ಛವದಂತೆ ಅಲ್ಲಾಡದೇ ಮಲಗಿದ್ದರು.

ಮರುದಿನ ಬೆಳಗ್ಗೆ ಬೇಗನೆ ಎದ್ದ ವಿಜಯ, ನೀರೊಲೆಗೆ ಉರಿ ಹಾಕಿ, ಕಸ ಗುಡಿಸಲು ಬಂದ ಕೆಲಸದವಳಿಗೆ, ಅನ್ನ ಸಾರು, ತುಂಬಿದ್ದ ಪಾತ್ರೆಗಳನ್ನು ಖಾಲಿ ಮಾಡಿ ತೊಳೆದಿಡಲು ಹೇಳಿದ. ಹಾಲಿನವನು ಬೆಲ್‌ಮಾಡಲು, ಹಾಲು ತೆಗೆದು ಒಳಕ್ಕಿಟ್ಟು, ಸ್ನಾನಕ್ಕಿಳಿದ ನಂತರ ದೇವರ ಫೋಟೋಗಳ ಮೇಲಿದ್ದ ನೈರ್ಮಲ್ಯದ ಹೂಗಳನ್ನು ತೆಗೆದು ಸ್ವಚ್ಛಮಾಡಿದ. ಮತ್ತೆ ಹೂ ಬಿಡಿಸಿ ತಂದು, ದೇವರ ಪೂಜೆ ಮಾಡಿ, 'ಈ ಶೋಕತಪ್ತವಾದ ಮನೆಯಲ್ಲಿ ಎಲ್ಲರಿಗೂ ಮನೋಧೈರ್ಯವನ್ನು ಕೊಟ್ಟು ಕಾಪಾಡು,' ಎಂದು ಕೈಜೋಡಿಸಿ ಪ್ರಾರ್ಥಿಸಿದ.

ಹೊರಗೆ ಬಂದ ಗೆಳೆಯನನ್ನು ಎಬ್ಬಿಸಿ, ಸ್ನಾನ ಮಾಡಲು ಹೇಳಿದ. ಹಾಲಿನಲ್ಲಿದ್ದ ಮೋಹನನ ಫೋಟೋ ಉಡುಪು ಎಲ್ಲವನ್ನೂ ತೆಗೆದಿಟ್ಟ, ಮತ್ತೆ ಮತ್ತೆ ನೋಡುತ್ತಿದ್ದರೆ, ಉಷಾಳಿಗೆ ತೊಂದರೆಯಾಗುತ್ತದೆ, ಎಂದವನ ಯೋಚನೆ. ಸ್ಟೌ ಹೊತ್ತಿಸಿ ಹಾಲನ್ನು ಕಾಯಿಸಿ, ಕಾಫಿಗಿಟ್ಟ, ಕಾಫಿಪುಡಿ ಸಕ್ಕರೆ ಡಬ್ಬಗಳನ್ನು ಹುಡುಕಿ ತೆಗೆದಿಟ್ಟ, ಸ್ನಾನ ಮಾಡಿ ಬಂದ ಸುಧೀರ, ತಾಯಿಯನ್ನು ಕೈಹಿಡಿದೆಬ್ಬಿಸಿ, ಬಚ್ಚಲು ಮನೆಗೆ ಕರೆದೊಯ್ದು ಸ್ನಾನಕ್ಕೆ ನೀರು ತೋಡಿಕೊಟ್ಟು, ಆಕೆಯ ಬಟ್ಟೆಗಳನ್ನು ಹುಡುಕಿ ತಂದಿಟ್ಟ.

ಬೇಗನೆ ಸ್ನಾನಮಾಡುವಂತೆ ಹೇಳಿದ, ಜಾಸ್ತಿ ಹೊತ್ತು ಮಾಡಿದರೆ ಸುಸ್ತಾಗಿ ತಲೆ ತಿರುಗಿ ತೊಂದರೆಯಾಗುತ್ತದೆ, ಎಂದು ಹೇಳಿದ ಮಗನ ವಾತ್ಸಲ್ಯವನ್ನು ನೋಡಿ, ಅವರ ಕಣ್ಣು ತುಂಬಿ ಬಂತು. "ಉಷಾ ಹೇಗಿದ್ದಾಳಪ್ಪ"? ಎಂದು ಕೇಳಿದರು, ಮಗಳದೇ ಚಿಂತೆ ಅವರನ್ನು ಬಾಧಿಸುತ್ತಿತ್ತು. ಸುಧೀರ್ ಹೇಳಿದ, ಏನು ಯೋಚನೆ

ಮಾಡಬೇಡಮ್ಮ, ಡಾಕ್ಟರ್ ರಾತ್ರಿ ಇಂಜೆಕ್ಷನ್ ಕೊಟ್ಟು, ನಾನು ಬರುವವರೆಗೂ ಎಬ್ಬಿಸಬೇಡಿ, ಎಂದು ಹೇಳಿದ್ದಾರೆ. ನೀನು ಬೇಗ ಸ್ನಾನಮಾಡಿ ಕರೆ, ಬಂದು ಕರೆದುಕೊಂಡು ಹೋಗುತ್ತೇನೆ,'' ಎನ್ನುತ್ತಾ ಹೊರಗೆ ಬಂದ.

ವಿಜಯ ಅಷ್ಟರಲ್ಲಿ ಕಾಫಿ ಮಾಡಿ, ಅಡಿಗೆ ಕೋಣೆಯಲ್ಲಿ ತೂಗು ಹಾಕಿದ್ದ ಫ್ಲಾಸ್ಕ್‌ಗೆ ಎರಡು ಲೋಟ ಬಗ್ಗಿಸಿಟ್ಟ, ಸುಧೀರನನ್ನು ಕರೆದು ಕೈಗಿತ್ತ, ಕೃತಜ್ಞತೆ ಸೂಚಿಸಿ, 'ಆಪತ್ತಿಗಾದವನೇ ನೆಂಟ, ''ಕಣೋ ವಿಜಯಾ, ನಿನ್ನ ಸಹಾಯವನ್ನು ನಾನು ಈ ಜನ್ಮದಲ್ಲಿ ಮರೆಯಲಾರೆ" ಎಂದ ಸುಧೀರ. ಇದನ್ನೆಲ್ಲಾ ದೊಡ್ಡದಾಗಿ ತಿಳಿಯಬೇಡ, ನಿಮ್ಮ ತಾಯಿಯ ಸ್ನಾನವಾಗಿರಬೇಕು, ಕರೆದುಕೊಂಡು ಬಂದು ಮಲಗಿಸು, ನಾನು ಕಾಫಿಯನ್ನು ತರುತ್ತೇನೆ ಎಂದ ವಿಜಯ. ಕಾಫಿ ಕುಡಿಯಲು ಒಪ್ಪದೆ ಆಕೆ ನಿರಾಕರಿಸಿದರು. "ನನ್ನ ಮಗಳ ಭವಿಷ್ಯ ಮಣ್ಣುಗೂಡಿತು" ''ನನಗೆ ಬದುಕುವುದಕ್ಕಿಂತ ಸಾವೇ ಲೇಸು'' ಎಂದರು. ವಿಜಯ ಹೇಳಿದ, ''ನೋಡಿ ತಾಯಿ, ಇರುವ ಒಬ್ಬ ಮಗನನ್ನು ಅನಾಥನನ್ನಾಗಿಸಬೇಡಿ, ಈಗಲೇ ಸಾಕಷ್ಟು ನೊಂದಿರುವ ಅವನಿಗೆ ಹುಚ್ಚು ಹಿಡಿಯದಿರುವುದೊಂದೇ ಬಾಕಿ, ಇದ್ದುದರಲ್ಲಿ ನೀವೇ ಹಿರಿಯರು, ಅದಷ್ಟು ಸೈರಿಸಿಕೊಂಡು ನಿಮ್ಮ ಮಗಳಿಗೂ ಮಗನಿಗೂ ಆಧಾರವಾಗಿ ನಿಂತು ನಿಮ್ಮ ಮಕ್ಕಳ ಬಾಳನ್ನು ಉಳಿಸಿ, ಎಂದು ಸಮಾಧಾನಮಾಡಿ' ಕುಡಿಸಿದರು.

ಇನ್ನು ಉಳಿದವಳು ಉಷೆ, ಒಂದು ತಿಂಗಳೊಳಗೆ ತನ್ನೆಲ್ಲಾ ಸೌಭಾಗ್ಯಗಳನ್ನು ಕಳೆದುಕೊಂಡು ಪತಿಯನ್ನಗಲಿ ಈ ಅಂಧ ಸಮಾಜದಲ್ಲಿ ತನ್ನ ಜೀವನವನ್ನು ಹೇಗೆ ಕಳೆಯಬೇಕೋ ?

ಇವರನ್ನು ಸಮಾಧಾನಪಡಿಸಿಯಾಯಿತು, ''ಆ ಹೆಣ್ಣುಮಗಳಿಗೆ ಹೇಗೆ ಸಮಾಧಾನಪಡಿಸಲಿ?'' ಎಂದು ಹಲುಬಿದ ವಿಜಯ. ಇಬ್ಬರೂ ಹೊರಗೆ ಬಂದು ಕುಳಿತರು. ಹತ್ತು ನಿಮಿಷಗಳಲ್ಲಿ ಡಾಕ್ಟರ್ ಬರಲು ಮೂವರೂ ಉಷೆಯರ ರೂಮಿಗೆ ಬಂದರು, ಹೇಗೆ ಮಾತನಾಡಿಸಬೇಕು ? ಎಂದು ಮೊದಲೇ ತಿಳಿಸಿದರು, ಸಂಪತ್. ಅವರಿಗೂ ಪ್ರಾಣಮಿತ್ರನ ಮಡದಿಯ ಮೇಲೆ ಅನುಕಂಪವಿದ್ದರೂ, ತಮ್ಮ ವೃತ್ತಿ ಧರ್ಮದಂತೆ ನಡೆಯಬೇಕಿತ್ತು. ಉಷಳನ್ನು ಎಚ್ಚರಿಸಿದರು ಸಂಪತ್. ಎಚ್ಚರಗೊಂಡ ಅವಳು ಔಷಧದ ಪರಿಣಾಮದಿಂದ ಸ್ವಲ್ಪ ಮಂಕಳಂತೆ ತೋರಿತು. ಬಳಿಯಲ್ಲಿ ನಿಂತಿದ್ದ ಡಾಕ್ಟರ್ ತಮ್ಮ ಕೊರಳಲ್ಲಿ ಸ್ಟೆತಾಸ್ಕೋಪ್ ಧರಿಸಿದ್ದರು, ಅವರ ಪಕ್ಕದಲ್ಲಿ ನಿಂತಿದ್ದ ವಿಜಯನನ್ನು ನೋಡಿದಳು ಉಷೆ. ಅವಳಿಗೆ ನೆನಪಾಯಿತು, ಅಣ್ಣನ ಗೆಳೆಯ ವಿಜಯ ತನ್ನ ಮದುವೆಯಲ್ಲಿ ಅಣ್ಣನಿಗಿಂತ ಹೆಚ್ಚಾಗಿ ಓಡಾಡುತ್ತಿದ್ದರು. ಮತ್ತೆ ಅವಳು ಹಿಂದಿನ ದಿನ ನಡೆದ ದುರಂತವನ್ನು ನೆನೆದು ಗೋಳಿಟ್ಟಳು. ಡಾಕ್ಟರ್ ಸಂಪತ್‌ರನ್ನು, 'ತನ್ನ ಪತಿಯೆಡೆಗೆ ಕಳುಹಿಸಲು ಸಹಾಯಮಾಡಿ ಪುಣ್ಯಕಟ್ಟಿಕೊಳ್ಳಿ' ಡಾಕ್ಟರ್, ಎಂದು ಸಂಪತ್‌ರ ಕೈಹಿಡಿದು ಬೇಡಿದಳು ಉಷೆ.

ಸಮಾಧಾನ ಮಾಡಿಕೊಳ್ಳಬೇಕಮ್ಮ. ನಿನ್ನ ಪತಿಯ ಆತ್ಮಕ್ಕೆ ಶಾಂತಿ ಸಿಕ್ಕಬೇಕಾದರೆ, ನೀನು ಹೀಗೆ ಗೋಳಾಡಬಾರದು. ಪತಿಗೆ ತಕ್ಕ ಸತಿಯಾಗಬೇಕು, ದೇಶಕ್ಕೋಸ್ಕರ ಹೋರಾಡಿ ಮಡಿದ ಆ ನಿನ್ನ ವೀರಪತಿಗೆ ಸದ್ಗತಿ ದೊರೆಯಬೇಕು. ಈಕಡೆ ಸಾವಿನದವಡೆಯಲ್ಲಿ ಹೋರಾಡುತ್ತಿರುವ, ನಿಮ್ಮ ತಾಯಿ, ನಿನ್ನದೇ ಚಿಂತೆಯಿಂದ ಬಳಲುತ್ತಿರುವ ಒಬ್ಬನೇ ಅಣ್ಣ, ಇವರ ಪರಿಸ್ಥಿತಿ ನೋಡಿಯಾದರೂ ನೀನು ಧೈರ್ಯ ವಹಿಸಬೇಕು. ಎಲ್ಲವೂ ದೇವರ ಅಧೀನ, ನಾವೆಲ್ಲ ನಿಮಿತ್ತ ಮಾತ್ರ. ಕಡೆಯದಾಗಿ ಕಂಬನಿಯ ಕಾಣಿಕೆಯನ್ನರ್ಪಿಸಿ, ಜೀವನಸಮರದಲ್ಲಿ ಭಾಗವಹಿಸಬೇಕಲ್ಲದೆ, ನಿನ್ನ ಮಾವನವರ ಅಂತಿಮ ಕೋರಿಕೆಯನ್ನು ಈಡೇರಿಸಬೇಕು. ಸೇರಿದಮನೆ, ಹುಟ್ಟಿದ ಮನೆಯನ್ನು ಉದ್ಧಾರಮಾಡಿ, ನಿನ್ನ ಸೇವೆಯನ್ನು ದೇಶಕ್ಕಾಗಿ ಮೀಸಲಿಟ್ಟು, ಆದರ್ಶ ವೀರಸತಿಯಾಗಿ ಬಾಳಿ, ಜೀವನವನ್ನು ಸಾರ್ಥಕಪಡಿಸಿಕೊಳ್ಳಬೇಕಲ್ಲದೆ, ಹೇಡಿಯಂತೆ, ಆತ್ಮಹತ್ಯೆಗೆ ಎಂದೆಂದಿಗೂ ಪ್ರಯತ್ನಿಸಬಾರದು, ಎಂದರು ಸಂಪದ್.

ಮೌನದಿಂದ ಕುಳಿತ ಉಷೆಗೆ, ಒಂದೊಂದು ಮಾತೂ ಮನಸ್ಸನ್ನು ಮುಟ್ಟಿತು. ಹೌದು, ತನ್ನ ಪತಿಯ ಆತ್ಮಕ್ಕೆ ಶಾಂತಿಸಿಗಬೇಕು. ತನ್ನ ಅಣ್ಣನನ್ನೂ ತನ್ನ ಜೊತೆಯಲ್ಲೇ ಮುಳುಗಿರುವ ತಾಯಿಯನ್ನೂ ಉಳಿಸಿಕೊಳ್ಳಬೇಕು, ನನ್ನಿಂದಾಗಿ ಯಾರೂ ತೊಂದರೆಗೊಳಗಾಗಬಾರದು, ನನ್ನ ಹಣೆಯ ಬರಹ ನಾನೇ ಅನುಭವಿಸಲು ಸಿದ್ಧಳಾಗಬೇಕೆಂದು ನಿಶ್ಚಯಿಸಿದಳು.

"ದೇವರ ಸನ್ನಿಧಿಗೆ ಸೇರಿದ ಪತಿಯನ್ನು ನೆನೆದು, ತನಗೆ ಮನೋಧೈರ್ಯವನ್ನು ಕೊಟ್ಟು ಕಾಪಾಡಿ" ಎಂದು ಬೇಡಿದಳು. ಅವಳ ಗಾಢಾಂಧಕಾರ ತುಂಬಿದ ಮನದಲ್ಲಿ ಜ್ಯೋತಿಬೆಳಗಿದಂತಾಯಿತು. ಅವಳ ಕಣ್ಣುಗಳು ದೃಢನಿಶ್ಚಯದಿಂದ ಹೊಳೆಯುತ್ತಿದ್ದವು. ನೀವು ಹೇಳುವುದು ಸರಿ, ನನ್ನ ಅಳಲನ್ನು ನುಂಗಿ, "ಈ ಭವದ ಬಾಳನ್ನು ಅನುಭವಿಸಲು ಸಿದ್ಧಳಾಗಿರುವೆ,' ಎಂದಳು. ಅವರಿಬ್ಬರಿಗೂ ವಂದಿಸಿ ಒಳಗೆಬಂದಳು. ತಾಯಿಯ ಬಳಿ ಕುಳಿತಿದ್ದ ಅಣ್ಣನಿಗೆ, ತಾನೆ ಹೇಳಿದಳು, "ಏನಣ್ಣ ಮಾಡುವುದು ನನ್ನ ಹಣೆಯಲ್ಲಿ ಈ ರೀತಿ ಬರೆದಿತ್ತು, ಪರಿಸ್ಥಿತಿಯನ್ನು ಇಬ್ಬರೂ ಧೈರ್ಯದಿಂದ ಎದುರಿಸೋಣ, ನೀನು ನನ್ನ ಬಗ್ಗೆ ಯೋಚಿಸಿ ಹಣ್ಣಾಗಬೇಡ"? ಎಂದಳು.

'ಉಷಾ, ನೀನು ಹೇಳಿದಂತೆ ಆಗಲಿ, ಎಷ್ಟೇ ಕಷ್ಟ ಬಂದರೂ, ನಿನಗೋಸ್ಕರ ನನ್ನ ಜೀವನವನ್ನು ಮುಡುಪಾಗಿಡುತ್ತೇನೆ, ಸಂಶಯ ಪಡಬೇಡ, ಎಂದ ಸುಧೀರ್. ಉಷಾ ಸ್ನಾನಮಾಡಲು ಹೊರಟಳು. ವಿಜಯ ಮತ್ತು ಸಂಪತ್‌ರಿಗೆ ದೊಡ್ಡಹೊರೆಯಿಳಿದಂತಾಗಿತ್ತು. ಸಧ್ಯ ಇಷ್ಟು ಬೇಗ ಮನಸ್ಸನ್ನು ಸ್ಥಿಮಿತಕ್ಕೆ ತಂದುಕೊಂಡಳಲ್ಲ' ಎಂದು ಹರ್ಷಪಟ್ಟರು. ಗೆಳೆಯರಿಬ್ಬರ ಕೈಕುಲುಕಿ, ನನ್ನ ತಂಗಿಯ ಬಾಳನ್ನು ಉಳಿಸಿದ ಪುಣ್ಯ ನಿಮ್ಮದು ಎಂದ ಸುಧೀರ.

(ಮುಂದುವರಿಯುವುದು)

(10 ನೇ ಪುಟದಿಂದ)

ಇರುವುದು ಇನ್ನೊಂದು, ಹಣ ಒಬ್ಬನದು, ದುಡಿಮೆ ಇನ್ನೊಬ್ಬನದು, ಹೆಸರು ಮಾತ್ರ ತನ್ನದಾಗಬೇಕೆಂಬ ಭಂಡತನ, ಇಂಥ ಅಕ್ರಮಗಳಲ್ಲಿ ತೊಡಗುವ ನಮಗೆ ಮನದ ಈ ಅವಗುಣವನ್ನು ಝಾಡಿಸಲು ಕಸಪೊರಕೆ ಬೇಕು. ಆದಕ್ಕೇ ಕವಿ

"ಕಸಪೊರಕೆಯಲ್ಲದೆಯೆ ಬೇರೆ ಗುರುವೇತಕ್ಕೆ
ಮಾನವತೆಯ ಮೇಲೆ ಕೊಂಡೊಯ್ಯುವದಕೆ"

ಎಂದು ಪ್ರಶ್ನಿಸಿದ್ದಾರೆ.

'ಕಸಪೊರಕೆಯೆನಗೆ ಗುರು
ಮೇಣ್ ಎನ್ನ ಬಾಳಗುರಿ'

ಎಂದು ಸಾರಿದ್ದಾರೆ.

ಮಾಡಿ ಮರೆಯಲ್ಲಿ ನಿಲ್ಲುವ ವಿನಯಗುಣ, ಆಡದೇ ಮಾಡುವ ಆದರ್ಶಗುಣ, ತನ್ನನ್ನೇ ಇನ್ನೊಬ್ಬರ ಒಳಿತಿಗೆ ಸವೆಸುವ ಮಹದ್ಗುಣಗಳುಳ್ಳ ಕಸಪೊರಕೆ ಅಮಂಗಳ ವಲ್ಲ. ಮಂಗಳಕ್ಕೆ ಮಂಗಳ, ಮನದೊಳಗೆ ವೈಲಿಗೆಗಳನ್ನು ತುಂಬಿಕೊಂಡು ಮೇಲಿ ಮಿಂದು ಮಡಿಯುಟ್ಟವರನ್ನು ಕಸಪೊರಕೆ ಎಚ್ಚರಿಸುವುದಾದರೆ, ಹೊರಗೆ ಗುಡಿಸುವ ಇದು ನಮ್ಮ ಅಂತರಂಗದ ತುಂಬ ಚೆಲ್ಲವರಿದ ಒಳಗಸವನ್ನು ಗುಡಿಸಿ ಹೊರಹಾಕ ಬೇಕೆಂಬ ಅರಿವು ಮೂಡಿಸಬಲ್ಲುದಾದರೆ ಅದರ ಉಪಕಾರ ಸಣ್ಣದೇನು ? ಆದ್ದರಿಂದ ಅರ್ಥಮಾಡಿಕೊಳ್ಳಬಲ್ಲವರಿಗೆ ಕಸಪೊರಕೆ ಗುರು ; ಬಾಳಿನ ಗುರಿ.

(ಆಕಾಶವಾಣಿ ಕೃಪೆಯಿಂದ)

---

## ಶ್ರೀ ಜಡೇಸಿದ್ಧ ಶಿವಯೋಗೀಶ್ವರ ಸೇವಾ ಸಮಿತಿ

ಕಾಕುಬಾಳು : : ಹೊಸಪೇಟೆ ತಾಲ್ಲೂಕು.

ಸದ್ಭಕ್ತರೇ :–ಮೇಲ್ಕಂಡ ಸೇವಾಸಮಿತಿ, ಆಶ್ರಯದಲ್ಲಿ ತಾ॥ 2-9-81 ರಿಂದ ಪ್ರಾರಂಭಗೊಂಡು 1-12-81ರ ವರೆವಿಗೆ ಶ್ರೀ ಜಗದ್ಗುರು ವಿಶ್ವಾರಾಧ್ಯರು ಮತ್ತು ಶ್ರೀ ಜಡೇಸಿದ್ದ ಶಿವಯೋಗೀಶ್ವರರ ರಥೋತ್ಸವವು ಶ್ರೀ ಶ್ರೀ ಪೂಜ್ಯ ಶ್ರೀ ಮನ್ನಿರಂಜನ ಜಗದ್ಗುರು ಪ್ರಣವಸ್ವರೂಪಿ ಸಂಗನ ಬಸವ ಮಹಾಸ್ವಾಮಿಗಳು ಕೊಟ್ಟೂರು ಸ್ವಾಮಿ ಗಳ ಮಠ ಇವರ ದಿವ್ಯ ನೇತೃತ್ವದಲ್ಲಿ ಏರ್ಪಡಿಸಿದೆ. ಈ ಮಹೋತ್ಸವದ ವೇಳೆಯಲ್ಲಿ ದಿನಂಪ್ರತಿ ಪ್ರವಚನ, ಪಠಣ, ವಚನಗಾಯನ ಇತರೇ ಸಾಂಸ್ಕೃತಿಕ ವಾದನ ಕಾರ್ಯ ಗಳನ್ನು ಸುಪ್ರಸಿದ್ಧ ವಿದ್ವಾಂಸರುಗಳಿಂದ ಏರ್ಪಡಿಸಿರುತ್ತೆ. ಸಮಸ್ತ ಸದ್ಭಕ್ತ ಶಿವಶರಣ ಶರಣೆಯರೆಲ್ಲರೂ ಮತ್ತು ದೈವಭಕ್ತ ಮಂಡಳಿಯವರೆಲ್ಲರೂ ಈ ಮಹೋತ್ಸವದಲ್ಲಿ ಭಾಗಿಗಳಾಗಿ ಸೇವಾಕೈಂಕರ್ಯದಲ್ಲಿ ಪಾಲ್ಗೊಳ್ಳಲು ಸೇವಾಸಮಿತಿಯು ಆಹ್ವಾನಿಸಿರುತ್ತೆ.

LICENCED TO POST WITHOUT PRE PAYMENT LICENCE NO. 3
Registered with the Registrar of News papers for India unc
No. 1713
Siddaganga Monthly Magazine Siddaganga Mutt.
Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.